# ಸಿದ್ಧಗಂಗಾ

ಸಂಪುಟ-31 ಸಂಚಿಕೆ-10 ಅಕ್ಟೋಬರ್-1995.



## ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ
## ಪೀಠಾರೋಹಣ ವಜ್ರ ಮಹೋತ್ಸವ ಪ್ರತಿಷ್ಠಾನ.
### ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572 104

- ವಿದ್ಯೆ ಮತ್ತು ದಾಸೋಹಕ್ಕೆ ಶ್ರೀ ಸಿದ್ಧಗಂಗೆ ನಾಡಿನಲ್ಲಿ ಸುಪ್ರಸಿದ್ಧ ಕ್ಷೇತ್ರ.
- ಇಲ್ಲಿಯ ಮಾನವೀಯ ಸೇವಾ ಕಾರ್ಯಗಳು ಸಾಗರವನ್ನು ಹೋಲುತ್ತವೆ.
- ಇಂಥಹ ವಿಶಿಷ್ಟ ಸೇವಾ ಕೇಂದ್ರವಾಗಿ ರೂಪಿಸಿದವರು ಪೂಜ್ಯ ಶ್ರೀ ಶ್ರೀ ಗಳು.
- ನಿರಂತರ ಸೇವೆಯೇ ಅವರ ಬದುಕಿನ ದಿನಚರಿಯಾಗಿದೆ.
- 88 ರ ಹರಯದಲ್ಲೂ ದಣಿವರಿಯದ ಬದುಕು ಅವರದಾಗಿದೆ.
- ಶ್ರೀ ಶ್ರೀ ಗಳ ಮಹಾನ್ ಸಾಧನೆಯ ಪ್ರತೀಕವಾಗಿ ಸ್ಮಾರಕಗಳು ತಲೆ ಎತ್ತಿವೆ.
- ಈ ಯೋಜನೆಯ ವೆಚ್ಚ **5 ಕೋಟಿ ರೂಗಳು.** ಮುಕ್ಕಾಲು ಭಾಗದಷ್ಟು ಕಟ್ಟಡಗಳ ಕೆಲಸ ಮುಗಿದಿದೆ.
- ಈ ಭವ್ಯ ದಿವ್ಯ ಸ್ಮಾರಕಗಳು ಶ್ರೀ ಶ್ರೀ ಗಳ ಮಹಾನ್ ವ್ಯಕ್ತಿತ್ವ, ಸೇವಾತತ್ಪರತೆ, ವಿದ್ಯಾ ಪ್ರಸಾರ ದೀಕ್ಷೆ ಮತ್ತು ಮಾನವೀಯ ಮೌಲ್ಯಗಳನ್ನು ಮುಂದಿನ ಪೀಳಿಗೆಗೆ ಸ್ಫೂರ್ತಿ ನೀಡುವುದು ಮಾತ್ರವಲ್ಲದೆ, ಅವರ ನಿರಂತರ ದಣಿವರಿಯದ ಬದುಕಿನ ಸಂದೇಶವನ್ನು ಶತ, ಶತಮಾನಗಳು ಸಾರುತ್ತವೆ.
- 1996 **ನೇ ಮಾರ್ಚ್** ತಿಂಗಳಲ್ಲಿ ವಜ್ರಮಹೋತ್ಸವ ಆಚರಿಸಲು ತೀರ್ಮಾನಿಸಲಾಗಿದೆ. ಬೃಹತ್‌ಸ್ಮಾರಕ ಭವನಗಳನ್ನು ಶ್ರೀ ಮಠಕ್ಕೆ ಕೃತಜ್ಞತಾಪೂರ್ವಕವಾಗಿ ಒಪ್ಪಿಸಲಾಗುತ್ತದೆ.
- ನಾಡಿನ ಭಕ್ತಾದಿಗಳು, ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಎಲ್ಲ ಅಭಿಮಾನಿಗಳು ಉದಾರವಾಗಿ ಕಾಣಿಕೆ ನೀಡುವುದರೊಂದಿಗೆ ಸ್ಮಾರಕ ಯೋಜನೆಗಳು ಯಶಸ್ವಿಯಾಗಿ ಪೂರ್ಣವಾಗಲು ನೆರವಾಗಬೇಕಾಗಿ ಕೋರುತ್ತೇವೆ.

ವಿ.ಸೂ. ಭವ್ಯ ಸ್ಮಾರಕಗಳ ಚಿತ್ರವನ್ನು ಹಿಂಬದಿ ಪುಟದಲ್ಲಿ ನೋಡಿ. ಈ ಬೃಹತ್ ಕಟ್ಟಡಗಳನ್ನು ಪ್ರತ್ಯಕ್ಷವಾಗಿ ನೋಡಿದಾಗ ಧನ್ಯತೆ ಮೂಡಿಸಿ ಮೂಕ ವಿಸ್ಮಿತರನ್ನಾಗಿ ಮಾಡಿ ಶ್ರೀ ಶ್ರೀ ಗಳವರ ಮಹಾನ್ ವ್ಯಕ್ತಿತ್ವದ ಜೀವನದರ್ಶನವನ್ನು ವಿಮರ್ಶೆಗೆ ಒಳಪಡಿಸುತ್ತದೆ.

**ಪದ್ಮಭೂಷಣ ಡಾ. ಎಂ.ಸಿ. ಮೋದಿ,**
ಅಧ್ಯಕ್ಷರು.

**ಬಿ.ಎಸ್. ಮುದ್ದಪ್ಪ** ಐ.ಎ.ಎಸ್.(ರಿ),
ಕಾರ್ಯಾಧ್ಯಕ್ಷರು.

**ಎಸ್. ಎಸ್. ಹಸಬಿ,** ಐ.ಪಿ.ಎಸ್. (ರಿ),
ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ-31 ಸಂಚಿಕೆ-10 ಅಕ್ಟೋಬರ್-1995

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

"ಹೃದಯಾಂತರಾಳದೊಳು ತೊಳಗಿ ಬೆಳಗುವ" ಬೆಳಕೆ
ಸದಯ ಸಾಂತಃಕರಣ ಶ್ರೀಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

"ಜಗದ ಜೀವಾನಂದ" ನಿರುಮಲ ಚಿದಾಕಾಶ
ಧರೆಗಿಳಿದ ಶಿವಸೂರ್ಯ ವರಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

"ಕಾಯಿ ಬಳ್ಳಿಗೆ ಕಾಯಿ ದಿಮ್ಮಿತ್ತೆ" ನನ್ನ ಗುರುವೆ
ಕಾಯಿ ನೀನೆನ್ನನವನು ಎಲೆ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್.ವಿ. ವೀರಭದ್ರಯ್ಯ



# ಶ್ರೀವಾಣಿ

ಮನುಷ್ಯ ಚಿಂತನ ಶೀಲನಾಗಬೇಕು. ಮನುಷ್ಯ ಜನ್ಮಲಭ್ಯವಾಗಿರುವುದೇ ಮಹತ್ತರವಾದ ಪುಣ್ಯ ವಿಶೇಷ. ಹರಿಹರ ಹೇಳುವಂತೆ ಎಂಬತ್ನಾಲ್ಕು ಲಕ್ಷ ಜೀವರಾಶಿಗಳನ್ನೆತ್ತಿ ಬಂದಿದೆ ಈ ಜೀವಚೈತನ್ಯ. ಮನುಷ್ಯನಾಗಬೇಕು ಎಂದು ಹಂಬಲಿಸಿ ಹಾರೈಸಿ ಪಡೆದ ಮಹೋನ್ನತ ಜನ್ಮ ಇದು. ಇದಕ್ಕಾಗಿ ಪಟ್ಟ ಕಷ್ಟ ಕಾರ್ಪಣ್ಯಗಳಿಗೇನು ಕೊರತೆಯಿಲ್ಲ. ಅನುಭವಿಸಿದ ಭಂಗಬವಣೆಗಳಿಗೆ ಲೆಕ್ಕವಿಟ್ಟವರೆಷ್ಟು. ಅಕ್ಕಮಹಾದೇವಿಯವರೆಂದಂತೆ "ಬಾರದಯೋನಿ"ಗಳಲ್ಲಿ ಬಂದುದಾಗಿದೆ. ಪುಣ್ಯಪ್ರಾಪ್ತವಾಗಿದೆ. ಕಣ್ಣು ಮುಚ್ಚಬಾರದು. ನಾನು ಎಲ್ಲಿಂದ ಬಂದೆ ಎಂದು ಶಿಶು ಕೇಳಿದರೆ ನಾನು ಎಲ್ಲಿಗೆ ಹೋಗುತ್ತಿದ್ದೇನೆ ಎಂದು ಮರಣಾವಸ್ಥೆಯಲ್ಲಿರುವ ವ್ಯಕ್ತಿ ಪ್ರಶ್ನಿಸುತ್ತಿದ್ದಾನೆ. ಹೌದು ಎಲ್ಲಿಂದ ಎಲ್ಲಿಗೆ ಈ ಅನಂತ ಪಯಣ ಎಂದು ಪ್ರಾರಂಭವಾಯಿತು? ಮುಗಿಯುವುದೆಂದು? ಆದಿ ಅನಾದಿಗಳ ಬಾಂಧವ್ಯವಲ್ಲವೆ?

ಮನುಷ್ಯನೆಂದರೆ ಕೇವಲ ಭೌತಶರೀರವಲ್ಲ. ಆತ್ಮನನ್ನೊಡಗೂಡಿದ ಪವಿತ್ರ ದೇವಾಲಯ. ದೇಹದ ಬೆಳವಣಿಗೆ ಮುಖ್ಯ. ಕೇವಲ ದೇಹ ಬೆಳೆದರೆ ಸಾಲದು; ಆತ್ಮವಿಕಾಸವಾಗಬೇಕು ಕಾಯವಿಡಿದು ಬಂದ ಆತ್ಮ ಬೆಳಕಾಗಬೇಕು. ಆತ್ಮದ ಆಶ್ರಯ ಸ್ಥಾನವಾದ ದೇಹ ಆತ್ಮದ ಬೆಳವಣಿಗೆಗೆ ಸಹಾಯಕವಾಗಬೇಕು. ದೇಹಕ್ಕೆ ಏಳು ಬೀಳುಗಳುಂಟು. ಬಿದ್ದು ಹೋಗುವ ಕಾಯ ಕಾಯಸ್ಥವಾದ ಆತ್ಮನ ಅನುಕೂಲಕಾರಿಯಾಗಬೇಕು. ದೇಹ–ಆತ್ಮಗಳ ಸಮನ್ವಯ ಸಾರ್ಥಕ ಜೀವನ. ನಶ್ವರವೆನ್ನಬಹುದಾದುದೆಲ್ಲ ಅಳಿದು ಚಿರಂತನವಾದುದುಳಿಯಬೇಕಾದರೆ ಇರುವಷ್ಟು ದಿನ ಮಾನವೀಯತೆಯ ಆರಾಧನೆ ನಡೆಯಬೇಕು. ತಾತ್ವಿಕ ಜೀವನದ ಮೂಲಭೂತ ಅಗತ್ಯಗಳಾದ ಅನ್ನ ಬಟ್ಟೆ ವಸತಿ ಇತ್ಯಾದಿಗಳನ್ನು ಧರ್ಮ ಬದ್ಧವಾಗಿ ಸಂಪಾದಿಸುವ ಸಂಕಲ್ಪ ದೊಡ್ಡದು. ಧರ್ಮವೆಂದೂ ಜೀವನಕ್ಕೆ ವಿಮುಖವಾದುದಲ್ಲ. ಜನವಿರೋಧಿಯಾದುದು, ಜೀವವಿರೋಧಿಯಾದುದು ಧರ್ಮವಾಗಲಾರದು. ಸೃಷ್ಟಿಯಲ್ಲಿ ಯಾವುದೂ ಧರ್ಮ ಮೀರಿ ನಡೆಯುತ್ತಿಲ್ಲ ಮಾನವನ ಹೊರತಾಗಿ. ಅಗ್ನಿ ಸುಡುತ್ತಿದೆ, ಗಾಳಿ ಬೀಸುತ್ತಿದೆ, ನೀರು ಹರಿಯುತ್ತಿದೆ, ಗ್ರಹ ಉಪಗ್ರಹಗಳು ಕಿಂಚಿತ್ತೂ ತಪ್ಪದೆ ನಿಯಮನಿಷ್ಠವಾಗಿ ಚಲಿಸುತ್ತಿವೆ, ಹಗಲಿರುಳು ಉರುಳುತ್ತಿವೆ. ಪ್ರಾಣಿ ಪಶು ಪಕ್ಷಿಗಳು ಸ್ವಕರ್ಮಶೀಲವಾಗಿವೆ. ಹೀಗಿರುವಾಗ ಮನುಷ್ಯನೇಕೆ ಅಧರ್ಮಿಯಾಗಬೇಕು? ಪ್ರಕೃತಿ ವಿರುದ್ಧವಾಗಿ ಏಕೆ ನಡೆಯಬೇಕು? "ಕ್ರಮತಪ್ಪಿ ನಡೆವುದರಿಂಕಷ್ಟಮುಂಟೆ?"-ಕ್ರಮವೇಕೆ ತಪ್ಪಬೇಕು? ಅದಕ್ಕಾಗಿಯೇ ಪ್ರಕೃತಿಯಲ್ಲಿ ಋತು ಸಂಹಿತೆ ಇರುವಂತೆ ಮನುಷ್ಯನಿಗೆ ಆಚಾರ ಸಂಹಿತೆ, ನೀತಿಸಂಹಿತೆ ಬೇಕು. ವಿಚಾರ ಶುದ್ಧಿ ಆಚಾರ ಶುದ್ಧಿಗಳ ಸಮನ್ವಯಬರಬೇಕು.

[17-10-95ರಂದು ಶ್ರೀ ರಾಮೇಶ್ವರಸ್ವಾಮಿ ಸುಕ್ಷೇತ್ರದಲ್ಲಿ ನೀಡಿದ ಆಶೀರ್ವಚನ-ಸಂಗ್ರಹ]

# ವಿಜಯ ದಶಮಿ

ದಿನಾಂಕ 3, ಅಕ್ಟೋಬರ್ 1995 ಶ್ರೀ ಮಠದಲ್ಲಿ ವಿಜಯದಶಮಿ ಆಚರಿಸಲಾಯಿತು. ಈ ಸಂದರ್ಭದಲ್ಲಿ **ಶ್ರೀ ಶ್ರೀಗಳವರ ಸಂದೇಶ :** ಮನುಷ್ಯ ಮೃಗವಾಗಬಾರದು. ಧರ್ಮವನ್ನರಿತು ಬಾಳಬೇಕು. ಮಾನವೀಯತೆ ಬೆಳೆಸಿ ಕೊಳ್ಳುವ ಪ್ರಯತ್ನದಲ್ಲಿ ಪ್ರತಿದಿನ ಮುನ್ನಡೆಯಬೇಕು. ಬಸವಾದಿ ಶರಣರು ಕಟ್ಟಬಯಸಿದ ಸಮಾನತೆಯ ಸಮಾಜ ನಿರ್ಮಾಣದಲ್ಲಿ ಸಹಕಾರ ನೀಡಬೇಕು. ಧರ್ಮ ಕೂಡಿ ಬದುಕುವುದನ್ನು ತೋರಿಸುವ ಮಹಾಬೆಳಕು. "ವಿಜಯ ದಶಮಿ" ಯಂದು ನಮ್ಮಲ್ಲಿರುವ ಅನಿಷ್ಟ ಅನೈತಿಕ ಪ್ರವೃತ್ತಿಗಳನ್ನು ಬಿಡುವ ಪ್ರತಿಜ್ಞೆ ಮಾಡಬೇಕು. ಸಮಾಜ ಇಂದು ಅಜ್ಞಾನ ಅಂಧಕಾರದಲ್ಲಿ ಮುಳುಗಿದೆ. ಎಲ್ಲಾಕಡೆ ಭ್ರಷ್ಟಜೀವನ ತಾಂಡವಾಡುತ್ತಿದೆ. ಕುಡಿತ ಜೂಜುಗಳಿಂದ ಯುವ ಜನಾಂಗ ಹಾಳಾಗುತ್ತಿದೆ. ವಿಜಯ ದಶಮಿಯ ಆಚರಣೆಯಂದು ಇಂಥ ಅನಿಷ್ಟ ಅಭ್ಯಾಸ ಗಳನ್ನು ಬಿಡುವ ಸಂಕಲ್ಪ ಮಾಡಬೇಕು ಎಂಬುದಾಗಿ ದೃಷ್ಟಾಂತ ಕಥೆಗಳ ಮೂಲಕ ಕರೆ ನೀಡಿದರು.

ಜಿಲ್ಲಾ ಯುವಜನ ಸೇವಾ ಇಲಾಖೆಯವರು ಈ ಸಮಾರಂಭದಲ್ಲಿ ದೊಣ್ಣೆವರಸೆ, ಯೋಗಾಸನ, ಕರಾಟೆ ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಶ್ರೀ ಹೆಚ್.ವಿ. ವೀರಭದ್ರಯ್ಯ ವಿಜಯದಶಮಿ ಕುರಿತು ಉಪನ್ಯಾಸ ಮಾಡಿದರು. ಶ್ರೀ ಸಿದ್ಧಲಿಂಗೇಶ್ವರಸ್ವಾಮಿಗೆ ರಾಜೋಪಚಾರವಾಯಿತು.

ಸಮಾರಂಭಕ್ಕೆ ವಿವಿಧ ಮಠಗಳಿಂದ ಆಗಮಿಸಿದ ಪೂಜ್ಯ ಶ್ರೀಗಳು, ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಸಹಸ್ರಾರು ಸಂಖ್ಯೆಯಲ್ಲಿ ಆಗಮಿಸಿ ಶ್ರೀಗಳ ಕೃಪಾಶೀರ್ವಾದ ಪಡೆದು ಬನ್ನಿ (ಶಮಿ)ಪತ್ರೆ ಮುಡಿದು ಧನ್ಯರಾದರು.

## ಶ್ರೀ ಸಿದ್ಧಲಿಂಗೇಶ್ವರ ವಚನ



ಅಂಗಗುಣವುಂಟೆ ಲಿಂಗವನೊಳಕೊಂಡ ನಿರಂಗ ಸಂಗಿಗೆ?
ಆತ್ಮಗುಣವುಂಟೆ ಪರಮಾತ್ಮಲಿಂಗ ಸಂಬಂಧಿಗೆ ?
ಅಹಂಭಾವವುಂಟೆ ತಾನೆಂಬ ಭಾವವಳಿದು
ದಾಸೋಹಂ ದಾಸೋಹಂ ಎಂಬ ನಿರ್ಮಲ ನಿರಾವರಣಂಗೆ !
ಸದೇಹಾವರಣಂ ಎಂದೂ ಇಲ್ಲ ನೋಡಾ !
ತಾನೆಂದೆಂದೂ ಇಂದುಧರನಂಗದಲ್ಲಿ ಉದಯವಾಗಿ ಬಂದನಾಗಿ
ಹುಟ್ಟಿದ ಬಟ್ಟೆಯ ಮೆಟ್ಟಿನಡೆದು
ಹುಟ್ಟಿದಲ್ಲಿಯೇ ಹೊಂದುವಾತನೆ ಮಾಹೇಶ್ವರನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ತನ್ನ ತನು ಮನ ಭಾವಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳನ್ನು ಸಂಬಂಧ ಮಾಡಿಕೊಂಡವರ ತನುಗುಣ, ಮನಗುಣ ಭಾವ ಭ್ರಮೆಗಳೆಲ್ಲ ನಷ್ಟವಾಗುವುವು. ಈ ಮಾಯಿಕ ಪ್ರಪಂಚದಲ್ಲಿ ತಾವು ಹುಟ್ಟಿ ಬಂದಿದ್ದರೂ ಲಿಂಗಸಂಬಂಧದಿಂದ ಆ ಮಾಯಿಕ ಪ್ರಪಂಚಕ್ಕೊಳಪಡದೆ ಅದನ್ನೇ ಮೆಟ್ಟಿ ಅಲ್ಲಿಯೇ ಲಿಂಗಾಂಗ ಸಂಬಂಧವನ್ನು ಪಡೆದು ಮಾಹೇಶ್ವರರೆನಿಸಿ ಕೊಳ್ಳುವರು.

[ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ" :. ಶ್ರೀ.ತೋಂ.ಸಿ.ಕೈಂ.ಸೇ.ಸಂ. ಎಡೆಯೂರು–ಗದಗ]

## ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

## ಶ್ರೀ ರಾಮೇಶ್ವರಸ್ವಾಮಿ ಸುಕ್ಷೇತ್ರ

ದಿನಾಂಕ 17-10-95 ಶ್ರೀ ಮಠದ ಸೇವಾ ಜೀವನದಲ್ಲಿ ಒಂದು ಅವಿಸ್ಮರಣೀಯ ಕಾರ್ಯಕ್ರಮ. ನಿಸರ್ಗದ ಪ್ರಶಾಂತ ಸನ್ನಿಧಿ, ಶ್ರೀಗಿರಿಯ ತಪ್ಪಲು. ಸಿದ್ಧಗಂಗಾ ರಾಮಗಿರಿಗಳ ಸಂಗಮದ ಪರಿಸರ. ಎತ್ತನೋಡಿದರೂ ಹಸಿರು. ಪೈರು ಬೆಳೆದು ನಿಂತ ವಿಶಾಲ ಹೊಲಗಳು. 'ಬಸವಣ್ಣನ ಗುಡಿಹೊಲ' ಎಂದೇ ಹೆಸರುವಾಸಿ.

ಸುಂದರ ಲಿಂಗಮೂರ್ತಿ, ನಂದಿವಿಗ್ರಹ. ಪುಟ್ಟದೇವಾಲಯ. ಪ್ರಾಚೀನ ಅವಶೇಷಗಳ ಮಧ್ಯೆ ರಾರಾಜಿಸುವ ಶ್ರೀರಾಮ ಪೂಜಿಸಿದ ಶಿವಲಿಂಗ. "ತ್ರೇತಾ ಯುಗದಲ್ಲಿ ಶ್ರೀರಾಮ ಚಂದ್ರದೇವರು ರಾಮೇದೇವರ ಬೆಟ್ಟದಿಂದ ಈ ಮಾರ್ಗವಾಗಿ ನಾಮದ ಚಿಲುಮೆಗೆ ಹೋಗುವ ಮಧ್ಯದಲ್ಲಿ ಈಶ್ವರ ಪ್ರತಿಷ್ಠೆ ಮಾಡಿ ಪೂಜೆ ಮಾಡಿದರೆಂದು ಪ್ರತೀತಿ." ಬಹಳ ದಿನಗಳಿಂದ ಇಲ್ಲಿ ಶ್ರೀ ರಾಮೇಶ್ವರಲಿಂಗಕ್ಕೆ ಅಭಿಷೇಕಾದಿ ಪೂಜಾ ವಿಧಿಗಳು ಪರಮ ಪೂಜ್ಯ ಶ್ರೀ ಶ್ರೀಗಳವರ ಆದೇಶದ ಮೇರೆಗೆ ನಡೆದು ಬರುತ್ತಿದ್ದು, ಜೀರ್ಣೋದ್ಧಾರ ಕಾರ್ಯವೆಲ್ಲ ನಡೆದು ಮಂಗಳ ಮುಹೂರ್ತದಲ್ಲಿ ಸಮಾರಂಭ ಕ್ರಿಯಾಶೀಲ ವಾಯಿತು.

ತುಮಕೂರು ನಗರದಂಥ, ದೇವರಾಯಪಟ್ಟಣ, ಮಾರನಾಯಕನಪಾಳ್ಯ, ಕ್ಯಾತ್ಸಂದ್ರದ ಇನ್ನಿತರ ಗ್ರಾಮಗಳಿಂದ ಭಕ್ತಾದಿಗಳು ಆಗಮಿಸಿ ಸಮಾರಂಭ ವನ್ನು ಅರ್ಥಪೂರ್ಣವಾಗಿಸಿದರು. ಬಂಡೇಮಠದ ಪೂಜ್ಯ ಶ್ರೀ ಶಿವರುದ್ರಸ್ವಾಮಿ ಗಳು, ಶ್ರೀಮಠದ ಉತ್ತರಾಧಿಕಾರಿಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳು ನಗರದ ಪ್ರಸಿದ್ಧ ಕೈಗಾರಿಕೋದ್ಯಮಿಗಳಾದ ಶ್ರೀ ಎನ್.ಆರ್. ಜಗದೀಶ್, ಶಾಸಕರಾದ ಶ್ರೀ ಎಸ್. ಶಿವಣ್ಣ, ಜನತಾದಳದ ಜಿಲ್ಲಾಅಧ್ಯಕ್ಷರಾದ ಶ್ರೀ ಲಕ್ಷ್ಮಿನರಸಿಂಹಯ್ಯ, ತುಮಕೂರಿನ ಕೋರಿಕುಟುಂಬದ ಶ್ರೀ ಕೆ.ಎಸ್. ಮಂಜುನಾಥ್, ಶ್ರೀ ಮಠದ

ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಬಿ. ಗಂಗಪ್ಪ, ಆಡಳಿತಾಧಿಕಾರಿಗಳಾದ ಶ್ರೀ ಪಿ. ಎಸ್. ಪುಟ್ಟಶಂಕರಯ್ಯ, ನಿವೃತ್ತ ಪ್ರಾಂಶುಪಾಲರಾದ ಶ್ರೀ ಎಸ್. ಪಿ. ಶಿವಶಂಕರ್, ವಿದ್ವಾನ್ ಕೆ. ಬಸವರಾಜು, ಅವರುಗಳು ಸಮಾರಂಭದಲ್ಲಿ ಶ್ರೀ ಕ್ಷೇತ್ರದ ಮಹತ್ವವನ್ನು ಪರಿಚಯ ಮಾಡಿಕೊಟ್ಟರು. ಶ್ರೀ ಕ್ಷೇತ್ರಕ್ಕೆ ಅಗತ್ಯವಾಗಿ ಆಗಬೇಕಾಗಿರುವ ರಸ್ತೆ ಸಂಪರ್ಕವನ್ನು ಮಾಡಿಸಿ ಕೊಡುವುದಾಗಿ ಕ್ಷೇತ್ರದ ಶಾಸಕರು ಮತ್ತು ನಾಯಕರು ಆಶ್ವಾಸನೆಯಿತ್ತರು.

ಮನುಷ್ಯ ಸಸ್ಯವಲ್ಲ ಅಥವಾ ತರಕಾರಿಯಲ್ಲ ಅವನೊಬ್ಬ ಚಿಂತನಶೀಲ ಎಂದು ಆಶೀರ್ವಚನವನ್ನಾರಂಭಿಸಿದ ಪರಮ ಪೂಜ್ಯ ಶ್ರೀಗಳು ಸಾಕಾರ ನಿರಾಕಾರ ಪೂಜೆಳಗಪರಿಚಯವನ್ನು ಮಾಡಿಕೊಡುವುದರ ಜತೆಗೆ ಧರ್ಮದ ಅವಶ್ಯಕತೆ ಎಷ್ಟಿದೆ ಎಂಬುದನ್ನು ಸಭೆಯ ಗಮನಕ್ಕೆತರುತ್ತ ನೈತಿಕ ಅಧಃಪತನವಾಗಿರುವ ಸದ್ಯದ ಪರಿಸ್ಥಿತಿಯಲ್ಲಿ ಶಾಂತಿಯನ್ನಪೇಕ್ಷಿಸುವ ಸಂದರ್ಭದಲ್ಲಿ ದೈವ, ದೇವಾಲಯ, ಧರ್ಮಗಳ ಪಾತ್ರವೆಷ್ಟುದೆ? ಹೇಗೆ ಅವುಗಳ ಉಪಯೋಗ ಮಾಡಿಕೊಳ್ಳಬೇಕು ಎಂಬುದನ್ನು ದೃಷ್ಟಾಂತಗಳ ಮೂಲಕ ತಿಳಿಸಿದರು. ಕೊನೆಯಲ್ಲಿ 'ವೃದ್ಧಾಶ್ರಮ'ವನ್ನು ಶ್ರೀ ಕ್ಷೇತ್ರದಲ್ಲಿ ಪ್ರಾರಂಭಿಸುವ ಇಚ್ಛೆಯನ್ನು ವ್ಯಕ್ತಪಡಿಸಿದರು.

ಸಮಾಜ ಜೀವನದ ಪರಿಪೂರ್ಣತೆಗಾಗಿ ಏನೆಲ್ಲ ವ್ಯವಸ್ಥೆಗಳನ್ನು ಮಾಡಬೇಕೆಂಬ ಶಿವಸಂಕಲ್ಪ ಚಿತ್ತರಾಗಿ ಪರಮ ಪೂಜ್ಯರು ಆರ್ಥಿಕ ಸಂಸ್ಥೆಯಾಗಿ ಸಹಕಾರಿ ತತ್ವದ ಮೇಲೆ ಬ್ಯಾಂಕನ್ನು, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರುವಂತೆಯೇ ತುಂಬು ಜೀವನವನ್ನು ನಡೆಸಿ ಬಾಳಿನ ಸಂಧ್ಯೆಯಲ್ಲಿ ಕಳ್ಳು ಬಳ್ಳಿಯ ಹೃದಯವಂತಿಕೆಯ ಆರೈಕೆಯಿಂದ ವಂಚಿತರಾದ ವೃದ್ಧರನ್ನು ಕುರಿತು ಆಸಕ್ತರಾಗಿ ಸೇವಾಪಥದಲ್ಲಿ ಮಹತ್ವದ ಮತ್ತೊಂದು ಮೈಲಿಗಲ್ಲನ್ನಿಡಲಪೇಕ್ಷಿಸಿರುವುದು ಸಮಾಜದ ಭಾಗ್ಯ. ವೃದ್ಧರ ಆಶಾಕಿರಣ. ನಾಡಿನ ಉದಾರ ಹೃದಯಿಗಳು, ಸಂಘ ಸಂಸ್ಥೆಗಳು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಈ ದಿಶೆಯಲ್ಲಿ ಪೂಜ್ಯ ಶ್ರೀಗಳಮಣಿಹದಲ್ಲಿ ಸಹಾಯ ಸಹಕಾರ ನೀಡಬೇಕೆಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

# ಮಹಾತ್ಮರ ಬದುಕಿನ ಅಂತಿಮ ದಿನಗಳು

–ಗೋವಿಂದ ಮೂರ್ತಿ ದೇಸಾಯಿ [ಕೃಪೆ. ಸಂಯುಕ್ತ ಕರ್ನಾಟಕ.]

**ಮಹಾತ್ಮಾ ಗಾಂಧಿ ಅವರ ಶ್ರೇಷ್ಠ ಕ್ಷಣಗಳೆಂದರೆ ಅವರ ಜೀವನದ ಅಂತಿಮ ದಿನಗಳು. ದಲಿತ ಜನಾಂಗದ ಮೂಕ ಸಂಕಟಗಳ ಮೂರ್ತ ಸ್ವರೂಪವಾಗುವ ಎತ್ತರಕ್ಕೇರಿದ್ದ ಗಾಂಧೀಜಿ ಸತತ ಸತ್ಯಾನ್ವೇಷಣೆಯಲ್ಲಿ ತೊಡಗಿದರು ಎಲ್ಲಿಯ ವರೆಗೆ ನನ್ನ ನಿಷ್ಠೆ ಪ್ರಖರವಾಗಿದೆಯೋ ಅಲ್ಲಿಯವರೆಗೂ ನಾನು ಜೀವಂತ ಇರುತ್ತೇನೆ. ಸಮಾಧಿಯಲ್ಲಿ ಕೂಡಾ ನಾನು ಬದುಕಿರುತ್ತೇನೆ. ಅಲ್ಲಿಂದ ಮಾತ ನಾಡುತ್ತೇನೆ ಎನ್ನುತ್ತಿದ್ದರು ಗಾಂಧೀಜಿ.**

'ಮಾನವ ಕುಲದ ಅಂತರ್ವಾಣಿಯ ಪರಮಸಾಕ್ಷಿ' ಎಂದು ವಿಶ್ವವೇ ಗೌರವಿಸುತ್ತಿದ್ದಾಗ ೧೯೪೭ ಆಗಸ್ಟ ೧೫, ರಂದು ಭಾರತದ ರಾಜಧಾನಿ ದಿಲ್ಲಿಯಲ್ಲಿ ಸ್ವಾತಂತ್ರ್ಯವನ್ನು ಸಂಭ್ರಮದಿಂದ ಆಚರಿಸುತ್ತಿರುವಾಗ, ಮಹಾತ್ಮ ಗಾಂಧೀಜಿ ದೂರದ ಕಲಕತ್ತಾ ನಗರದಲ್ಲಿದ್ದರು ! ಅಂದು ಸಂಭ್ರಮದ ಉತ್ಸವದಲ್ಲಿ ಪಾಲ್ಗೊಳ್ಳದೆ ಪ್ರಾರ್ಥನಾದಿನವನ್ನಾಗಿ ಕಳೆದರು. ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯರು ಅಲ್ಲದೆ ತಾವು ರಾಜಧಾನಿಯಲ್ಲಿ ಉಪಸ್ಥಿತರಿದ್ದರೆ ಸರಕಾರಕ್ಕೆ ಕಿರಿಕಿರಿಯುಂಟಾಗಬಹುದೆಂಬುದು ಅವರ ವಿಚಾರವಾಗಿತ್ತು.

ಗಾಂಧೀಜಿ ಕಲಕತ್ತಾದಲ್ಲಿ ಅಸ್ಪೃಶ್ಯರ ವಸತಿಯಲ್ಲಿ ಉಳಿದು ಪ್ರಾರ್ಥನೆಯನ್ನು ನಡೆಸಿದರು. ಆಗ ಕಲಕತ್ತಾದಲ್ಲಿ ಪ್ರಾಂತಿಕ ಪ್ರಧಾನಮಂತ್ರಿಗಳಾಗಿದ್ದ ಸುಹುರ್ ವರ್ದಿಯವರು ಗಾಂಧೀಜಿ ಇದ್ದಲ್ಲಿ ಬಂದರು. ತಾವು ಗಾಂಧೀಜಿಯ ಜೊತೆ ಇದ್ದರೆ ಕೋಮು ಸೌಹಾರ್ದಕ್ಕೆ ಸಹಾಯವಾಗುವುದೆಂದು, ವ್ಹಾಯಿಸ್‌ರಾಯ್ ಲಾರ್ಡ್ ಮೌಂಟ್‌ಬ್ಯಾಟನ್ನರಿಗೆ ತಿಳಿಸಿ ಅವರ ಅನುಮತಿ ಪಡೆದೇ ಬಂದರು. ಇದಲ್ಲದೆ, ಸುಹುರ್ ವರ್ದಿಯವರು ಈ ಜಾತಿಯ ಗಲಭೆಗಳನ್ನು ಅಡಗಿಸಲು ತಾವು ಪೊಲೀಸ್ ಶಕ್ತಿಯನ್ನು ಬಳಸುವದಿಲ್ಲೆಂದು ಹೇಳಿದರು. ಹಾಗೆ ನೋಡಿದರೆ, ಸುಹುರ್‌ವರ್ದಿಯವರ ಜೀವಕ್ಕೆ ಹಿಂದೂ ಒಬ್ಬನಿಂದ ಬೆದರಿಕೆಯಿತ್ತು. ಎಷ್ಟೇ ಗಲಭೆಗಳಾದರೂ ದೇಶದ ವಿಭಜನೆ ಮತ್ತು ಸ್ವಾತಂತ್ರ್ಯ ಸಮಾರಂಭಗಳು ಸುಸೂತ್ರವಾಗಿ ನಡೆದವು !

೧೯೪೬ ರಲ್ಲಿ ಮುಸ್ಲಿಂ ಲೀಗ್ ಚಳುವಳಿಯನ್ನು ಹೂಡಿತು. ಇದರಿಂದ ಕಲಕತ್ತಾದಲ್ಲಿ ನರಹತ್ಯೆಗಳು ನಡೆದವು. ಪ್ರತಿಪಕ್ಷಗಳು ಕೂಡ ಇದಕ್ಕೆ ಸಮನಾದ ಕಾರ್ಯವನ್ನು ಪ್ರದರ್ಶಿಸಿದವು. ಇದನ್ನು ನೋಡಿ ಮುಸ್ಲಿಂರು ಬಹುಸಂಖ್ಯೆಯಲ್ಲಿರುವ ನೌಖಾಲಿಯ ಪ್ರದೇಶದಲ್ಲಿ ಹಿಂಸೆ ತಾಂಡವವಾಡಿದವು. ಇದರ ಪ್ರತಿಧ್ವನಿಯು ಬಿಹಾರದಲ್ಲಿ ಕೇಳಿಸಿತು. ನೌಖಾಲಿಯಲ್ಲಿ ನಡೆದ ಘಟನೆಗಳು ಪ್ರತಿಭಟನೆಗಳು ಅಲ್ಲಲ್ಲಿ ಕಿಚ್ಚೆನ್ನೆಬ್ಬಿಸಿದವು. ಈ

ಸೇಡು–ಪ್ರತಿಸೇಡುಗಳನ್ನು ನಿಯಂತ್ರಿಸದಿದ್ದರೆ ಭಾರತವು ಸ್ವಾತಂತ್ರ್ಯವನ್ನು ಪಡೆಯುವದು ಅಸಾಧ್ಯವಿತ್ತು. ಆದರಿಂದ ಗಾಂಧೀಜಿ ಶಾಂತಿಗಾಗಿ ಪಾದಯಾತ್ರೆಯನ್ನು ಕೈಗೊಂಡರು.

೧೯೪೭ ಅಗಸ್ಟ ಮೊದಲನೆಯ ವಾರದಲ್ಲಿ ಗಾಂಧೀಜಿಯವರು ಕಾಶ್ಮೀರದಿಂದ ರಾವಳಪಿಂಡಿ ವಾಹ್ ನಿರಾಶ್ರಿತರ ಶಿಬಿರಕ್ಕೆ ಭೆಟ್ಟಿಯನ್ನಿತ್ತರು. ಅಲ್ಲಿದ್ದ೧೫೦೦೦ ಕ್ಕೂ ಹೆಚ್ಚು ಸಂಖ್ಯೆಯ ಶಿಬಿರವಾಸಿಗಳು ಮತೀಯ ಗಲಭೆಗಳಿಂದ ಅಂಜಿದ್ದರು. ಅವರಲ್ಲಿ ಹಿಂದುಗಳು, ಸಿಖ್ಖರು ಇದ್ದರು. ಈ ಹೊತ್ತಿಗೆ ಕಾಂಗ್ರೆಸ್ ಮತ್ತು ಮುಸ್ಲಿಂಲೀಗಗಳು ಮೌಂಟ್‌ಬ್ಯಾಟನ್ನರ ವಿಭಜನಾ ಯೋಜನೆಯನ್ನು ಒಪ್ಪಿಕೊಂಡಿದ್ದವು. ವಾಹ್ ನಿರಾಶ್ರಿತರ ಶಿಬಿರದಲ್ಲಿದ್ದವರು ಆಗಸ್ಟ ೧೫ ಕ್ಕೆ ಅಸ್ತಿತ್ವಕ್ಕೆ ಬರಲ್ಲಿದ್ದ ಪಾಕಿಸ್ತಾನದಲ್ಲಿ ಇರುವದು ಸಾಧ್ಯವಿಲ್ಲವೆಂದು ಗಾಂಧೀಜಿಗೆ ಹೇಳಿದರು. ಆದರೆ ಗಾಂಧೀಜಿಗೆ ಅವರು ಪಾಕಿಸ್ತಾನವನ್ನು ತ್ಯಜಿಸುವದು ಬೇಕಿರಲಿಲ್ಲ. ಅಲ್ಲಿಯ ಕಲೆಕ್ಟರರು ಅವರಿಗೆ ಪುನರ್ವಸತಿಯನ್ನು ಒದಗಿಸುವ ಆಶ್ವಾಸನೆಯನ್ನು ಕೊಟ್ಟರು. ಆದರೆ ಅನಿರೀಕ್ಷಿತವಾದದು ನಡೆದೇ ಹೋಯಿತು. ಮುಸ್ಲಿಮೇತರ ಪ್ರಾಬಲ್ಯವಿರುವ ಪೂರ್ವ ಪಂಜಾಬವು ರಾವಳಪಿಂಡಿಯ ಘಟನೆಗೆ ಪ್ರತಿಭಟನೆಯೆಂದು ಕೋಲಾಹಲವನ್ನೆಬ್ಬಿಸಿತು. ಪೂರ್ವ ಪಂಜಾಬ ಮೇಲೆ ಸೇಡನ್ನು ತೀರಿಸಿಕೊಳಲು ಪಶ್ಚಿಮ ಪಂಜಾಬ ಕೆರಳಿ ನಿಂತಿತ್ತು. ಎಪ್ಪತ್ತನಾಲ್ಕು ಸಿಖ್ಖ ಸ್ತ್ರೀಯರನ್ನು ಮಂತಾತರಗೊಳಿಸಲು ಮುಸಲ್ಮಾನರು ಬೆನ್ನಟ್ಟಿದರು. ಹೆಂಗಸರು ತಾವು ಸ್ನಾನಮಾಡಿ, ಗುರುದ್ವಾರದಲ್ಲಿ ಪ್ರಾರ್ಥನೆಯನ್ನು ಸಲ್ಲಿಸಿದ ಮೇಲೆ ತಮ್ಮನ್ನು ಮಂತಾಂತರಗೊಳಿಸಬೇಕೆಂದು ಕೇಳಿಕೊಂಡರು. ತಲೆತಿರುಕರು ಅದಕ್ಕೊಪ್ಪಿದರು. ಗೌರವವನ್ನು ಳಿಸಿಕೊಳ್ಳಲು ಎಪ್ಪತ್ತುಮೂರು ಸ್ತ್ರೀಯರು ಸ್ನಾನಕ್ಕಾಗಿ ಹೋದಾಗ ಬಾವಿಗೆ ಹಾರಿ ಪ್ರಾಣತ್ಯಾಗ ಮಾಡಿದರು. ಒಬ್ಬಳು ೧೭ವರುಷದ ಹುಡುಗಿ ಪಾರಾಗಿ ನಿರಾಶ್ರಿತರ ಶಿಬಿರಕ್ಕೆ ಬಂದಳು. ಇದನ್ನು ನೋಡಿ ಮತಾಂತರ ಗೊಳಿಸಲು ಬಂದವರು ಪಲಾಯನ ಮಾಡಿದರು.

೧೯೪೭ ಅಗಸ್ಟ ಕೊನೆಯಲ್ಲಿ ಮತೀಯ ಗಲಭೆಗಳನ್ನು ಕಂಡು ಶಾಂತಿ ನೆಲೆಸುವವರೆಗೂ ಗಾಂಧೀಜಿ ಆಮರಣಾಂತಿಕ ಉಪವಾಸವನ್ನು ಕೈಗೊಂಡರು.

೧೯೪೭ ರ ಕೊನೆಕೊನೆಯಲ್ಲಿ ಭಾರತದ ವಾಯವ್ಯಕ್ಕೆ ರಕ್ತದ ಕೋಡಿ ಹರಿಯಿತು. ಬೆಂಕಿ ತನ್ನ ನಾಲಿಗೆಯನ್ನು ಚಾಚಿತ್ತು. ಆದರೂ ಬಂಗಾಲವು ಉಳಿದಪ್ರಾಂತ್ಯಗಳಷ್ಟು ಅವ್ಯವಸ್ಥಿತ ಮತ್ತು ಗಂಡಾಂತರಕಾರಿಯಾಗಿ ಉಳಿಯಲಿಲ್ಲ. ಆದರೆ ಪಂಜಾಬದವರು ಗುಳೇಕಟ್ಟಿಕೊಂಡು ಬಂದಿದ್ದರಿಂದ ಬಂಗಾಲದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಮೇಲೆ ಭೀಕರ ಪರಿಣಾಮವನ್ನುಂಟು ಮಾಡಿತು.

## : ಆತ್ಮಶುದ್ಧೀಕರಣ ಉಪವಾಸ :

ಬಂಗಾಲದಕ್ಕಿಂತ ಹೆಚ್ಚು ಕೋಮು ಗಲಭೆಗಳು ಉತ್ತರದಲ್ಲಿ ವಿಶೇಷತಃ ದಿಲ್ಲಿಯಲ್ಲಿ ತಲೆಎತ್ತಿದ್ದರಿಂದ ಗಾಂಧೀಜಿಯವರಿಗೆ ತುಂಬಾ ಬೇಸರವಾಯಿತು. ಅವರ ಹಿಂಸೆಯ ಅಪಾಯಕ್ಕಿಂತ ಹೆಚ್ಚಾಗಿ ಅಸತ್ಯದ ಅಪಾಯಕ್ಕೆ ನೊಂದರು. ಹಿಂದೂ ನಾಯಕರು ಹಿಂದೂಗಳ ದುರ್ವರ್ತನೆಗಳಿಗೆ ನೀರೆರೆಚಿ ಸತ್ವಹೀನವಾಗಿ ಮಾಡಲು ಪ್ರಯತ್ನಿಸಿದರೆ,

ಮುಸ್ಲಿಂನಾಯಕರು ಉತ್ಪ್ರೇಕ್ಷಿಸಿ ಬಣ್ಣ ಬಳಿದು ಸುದ್ದಿಗಳನ್ನು ಹುಟ್ಟಿಸುತ್ತಿದ್ದರು. ಅಸತ್ಯವು ತಾಂಡವವಾಡುತ್ತಿರುವಾಗ ಗಾಂಧೀಜಿಗೆ ಸತ್ಯಸ್ಥಿತಿ ತಿಳಿಯುವದು ಹೇಗೆ? ಇದರ ಪರಿಣಾಮವಾಗಿ ಗಾಂಧೀಜಿ ೧೯೪೮, ಜನವರಿ ೧೩ ರಂದು ದಿಲ್ಲಿಯ ಬಿರ್ಲಾ ಭವನದಲ್ಲಿ ಆತ್ಮಶುದ್ಧೀಕರಣ ಮತ್ತು ತಮ್ಮ ಸುತ್ತಲಿನ ವಾತಾವರಣವು ತಿಳಿಗೊಳ್ಳುವದಕ್ಕಾಗಿ ಉಪವಾಸವನ್ನು ಪ್ರಾರಂಭಿಸಿದರು. ಉಪವಾಸದ ಮೊದಲನೆಯ ದಿವಸವೇ ಪಶ್ಚಿಮ ಪಾಕಿಸ್ತಾನದಿಂದ ನಿರಾಶ್ರಿತರು ಕ್ರುದ್ಧರಾಗಿ ಮೆರವಣಿಗೆ ತೆಗೆದು "ಗಾಂಧೀ ಕೋ ಮರನೇ ದೋ. ಹಮೇ ರಹನೇ ಘರ್ ದೋ' (ಗಾಂಧಿಯವರನ್ನು ಸಾಯಲು ಬಿಡಿ. ನಮಗೆ ವಾಸಿಸಲು ಮನೆ ಕೊಡಿ) ಎಂದು ಕಿರುಚಿದರು. ದಿಲ್ಲಿಯ ಕೊರೆಯುವ ಚಳಿಯಲ್ಲಿ ಅವರಿಗೆ ಬೆಚ್ಚಗಿನ ಸ್ಥಳ ಬೇಕಿತ್ತು. ಈ ನೆಲೆಯಿಲ್ಲದ ಜನರು ಖಾಲಿ ಇರುವ ಮುಸಲ್ಮಾನರ ಮನೆಗಳನ್ನು, ಮಸೀದಿಗಳನ್ನು, ಬೇರೆ ಖಾಲಿ ಇರುವ ಸ್ಥಳಗಳನ್ನು ಆಕ್ರಮಿಸಬೇಕೆಂದು ಮಾಡಿದ್ದರು. ಹೀಗೆ ಮಾಡಿದರೆ, ಸುಲಿಗೆಗೆ ಅವಕಾಶವನ್ನು ಕಲ್ಪಿಸಿದಂತಾಗುವದೆಂದು ಗಾಂಧೀಜಿ ಇದನ್ನು ತಡೆಹಿಡಿದರು. ಅದರಿಂದ ಈ ಜನರು ಕೋಪೋದ್ರಿಕ್ತರಾಗಿದ್ದರು. ಹಲವಾರು ತಿಂಗಳಿಂದ ಅರೆ ಉಪವಾಸ ಮಾಡಿದ ಗಾಂಧೀಜಿಯವರ ದೇಹ ದುರ್ಬಲವಾಗಿತ್ತು. ಹೀಗಾಗಿ ಉಪವಾಸದ ಮಾರನೇ ದಿವಸ ಅವರ ದೇಹಸ್ಥಿತಿ ಮತ್ತಷ್ಟು ಕ್ಷೀಣಿಸಿತ್ತು.

ಮಹಾತ್ಮರು ತಾವು ಏತಕ್ಕಾಗಿ ಉಪವಾಸವನ್ನು ಮಾಡಿದೆವೆಂದು ಯಾವ ಕಾಂಗ್ರೆಸ್ಸಿಗರಿಗೂ ಹೇಳಲಿಲ್ಲ. ಆದರೆ ಮೌಂಟ್‌ಬ್ಯಾಟನ್‌ರಿಗೆ ರಹಸ್ಯವಾಗಿ ಹೇಳಿದ್ದರು. ಮೌಂಟ ಬ್ಯಾಟನ್‌ರ ಹೇಳಿಕೆಯಂತೆ ಆದು 'ನಿಗೂಢವೇ' ಇದೆ. ಕರಾಚಿಯಲ್ಲಿ ಸಿಖ್ಖರನ್ನು, ನಾರ್ಥವೆಸ್ಟ್ ಫ್ರಂಟೀಯರ್ ರೇಲು ಗುಜರಾತಕ್ಕೆ ಬಂದಾಗ ನಡೆದ ಮುಸಲ್ಮಾನೇತರ ಕಗ್ಗೊಲೆಗಳನ್ನು ಕಂಡು, ಅದರ ಪ್ರತೀಕಾರವು ಭಾರತದಲ್ಲಿ ತಲೆ ಎತ್ತಬಹುದೆಂದು ಉಪವಾಸವನ್ನು ಕೈಗೊಂಡರಂತೆ.

ವಲ್ಲಭಭಾಯಿ ಪಟೇಲರು ಗಾಂಧಿ ಉಪವಾಸದ ಬಗ್ಗೆ ವಿಲಕ್ಷಣ ವಿಚಾರವನ್ನು ತಾಳಿದ್ದರು. ಅವರು ಮೌಂಟ್ ಬ್ಯಾಟನ್‌ರನ್ನು ಭೆಟ್ಟಿಯಾಗಿ "ಈ ಸಲ ಗಾಂಧೀಜಿ

ಉಪವಾಸ ಮಾಡುವ ನಿರ್ಣಯವನ್ನು ತಾವೇ ತೆಗೆದುಕೊಂಡಿದ್ದಾರೆ. ಈ ಹಿಂದೆ ನಮ್ಮೊಡನೆ ಸಮಾಲೋಚಿಸುತ್ತಿದ್ದರು. ಅವರು ಉಪವಾಸ ಮಾಡುವ ಈ ಕಾಲವು ಸೂಕ್ತವಿಲ್ಲ. ಮಹಾತ್ಮರೇನೋ ಪರಿಣಾಮ ಒಳ್ಳೆಯದಾಗಬಹುದೆಂದು ಭಾವಿಸಿದ್ದಾರೆ ಆದರೆ ಅದರ ಪರಿಣಾಮ ತದ್ವಿರುದ್ಧವಾಗುವ ಸಂಭವವಿದೆ. ಕೋಮು ಸೌಹಾರ್ದತೆ ಆಗಬೇಕಿದ್ದರೆ, ಪಶ್ಚಿಮ ಪಾಕಿಸ್ತಾನದಲ್ಲಿರುವ ಪ್ರತಿಯೊಬ್ಬ ಸಿಖ್ಖ ಮತ್ತು ಹಿಂದೂ ವನ್ನು ಅಲ್ಲಿಂದ ಸ್ಥಳಾಂತರಿಸಬೇಕು. ಹಾಗೆಯೇ ಪೂರ್ವ ಪಂಜಾಬ ಮತ್ತು ನೆರೆಹೊರೆ ಯಲ್ಲಿ ತೊದರೆಗೊಳಗಾದ ಸಿಖ್ಖ ಮತ್ತು ಹಿಂದುಗಳನ್ನು ಕೂಡ ನಾವಿಲ್ಲಗೆ ಕರೆತರ ಬೇಕು. ಇದರಿಂದ ಭಾರತದಲ್ಲಿರುವ ಮುಸಲ್ಮಾನರಿಗೆ ಶಾಂತಿ ಲಭಿಸುವದು" ಎಂದು ಹೇಳಿದರು. ಇಷ್ಟೇ ಅಲ್ಲ ಉಪವಾಸದ ಸಮಯದಲ್ಲಿ ಅವರು ದಿಲ್ಲಿಯ‌ನ್ನು ಬಿಟ್ಟು ಕಾಠೇವಾಡ, ನಂತರ ಮುಂಬೈಗೆ ಭೆಟ್ಟಿಯನ್ನಿತ್ತರು. ಹೊರಗೆ ಹೋದಲ್ಲಿ ಗಾಂಧೀಜಿ ಯವರ ಉಪವಾಸವನ್ನು ಶ್ಲಾಘಿಸಿ ಮಾತನಾಡುತ್ತಿದ್ದರು.

ಪಂಡಿತ ಜವಾಹರಲಾಲರು ಕೂಡ ಮೌಂಟ್ ಬ್ಯಾಟನ್‌ರೊಂದಿಗೆ ಗಾಂಧೀಜಿ ಯವರ ಉಪವಾಸವನ್ನು ಕುರಿತು ಮಾತನಾಡುವಾಗ ವಲಭಭಾಯಿ ಪಟೇಲರಿಗಿಂತ ಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವರು ಮಹಾತ್ಮರ ಉಪವಾಸವನ್ನು ತುಂಬಾ ಶ್ಲಾಘಿಸಿದರು.

ಗಾಂಧೀಜಿಯವರು ಉಪವಾಸದ ಪರಿಣಾಮ ಮತೀಯ ಮುಖಂಡರ ಮೇಲೆ ಪ್ರಭಾವ ಬೀರಿತು. ಮೌಂಟ್ ಬ್ಯಾಟನ್‌ರ ಸಲಹೆಯಂತೆ ನಿರಾಶ್ರಿತರ ಪುನರ್ವಸತಿ ಗಾಗಿ ಪುನರ್ವಸತಿ ಸಮಿತಿಯನ್ನು ಮಂತ್ರಿಮಂಡಳವು ರಚಿಸಿತು. ಇವರೆಲ್ಲರು ಮುಸ ಲ್ಮಾನರು. ವಿಶೇಷತಃ ದಿಲ್ಲಿ ಮುಸಲ್ಮಾನರ ರಕ್ಷೆಯ ಭಾರವನ್ನು ವಹಿಸಿಕೊಂಡರು. ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಡಾ. ಬಾಬು ರಾಜೇಂದ್ರ ಪ್ರಸಾದರು ಸರ್ವಪಕ್ಷಗಳ ಶಾಂತಿ ಸಮಿತಿಯನ್ನು ರಚಿಸಿದರು.

ಜನವರಿ ೧೭ ರಂದು ಗಾಂಧೀಜಿ ತಮ್ಮ ಉಪವಾಸವನ್ನು ನಿಲ್ಲಿಸಲು ಏಳು ಶರ ತ್ತುಗಳನ್ನು ವಿಧಿಸಿದರು. ಅವೆಲ್ಲವೂ ಮುಸಲ್ಮಾನರ ಸುರಕ್ಷಿತತೆಯ ಬಗ್ಗೆ ಇದ್ದವು. ಎಲ್ಲರೂ ಗಾಂಧಿಜೀಯವರ ಕರಾರುಗಳಿಗೆ ಒಪ್ಪಿದ್ದರಿಂದ ಗಾಂಧೀಜಿ ೧೯೪೮ ಜನವರಿ ೧೮ ರಂದು ತಮ್ಮ ಉಪವಾಸವನ್ನು ನಿಲ್ಲಿಸಿದರು.

ಕೆಲವರು ಗಾಂಧೀಜಿ ೧೨೫ ವರುಷ ಜೀವಿಸುವರು ಎಂದಿದ್ದಾರೆ. ಆದರೆ ಅವರ ಜೀವಕ್ಕೆ ಗಂಡಾಂತರ ಎದುರಾಗಿತ್ತು ಅವರ ಪ್ರಾರ್ಥನಾ ಸಭೆಯಲ್ಲಿ ಹಿಂದೂ ಕಟ್ಟಾಭಿಮಾನಿಯಾದ ಮದನಲಾಲ ಅನ್ನುವವನು ಬಾಂಬನ್ನು ಸಿಡಿಸಿದನು. ಅದರಿಂದ ಪ್ರಾರ್ಥನಾ ಸಭೆಯಲ್ಲಿ ಕೋಲಾಹಲವೆದ್ದಿತ್ತು. ಗಾಂಧೀಜಿ ಜನರಿಗೆ ಸಮಾಧಾನದಿಂದ

ಇರಲು ಹೇಳುತ್ತ "ನೀವೇಕೆ ಅಂಜುತ್ತೀರಿ ? ಪ್ರಾರ್ಥನೆ ಮಾಡುತ್ತ ಸಾಯುವದಕ್ಕಿಂತ ಉತ್ತಮವಾದ ಮರಣವು ಏನಿದೆ?" ಎಂದರು. ಪ್ರಾಯಶಃ ಸಾವಿನ ನೆರಳು ಅವರನ್ನು ಹಿಂಬಾಲಿಸಿದೆಯೆಂದು ಅವರಿಗೆ ತಿಳಿದಿತ್ತೇನೋ !

ಮಹಾತ್ಮರು ೧೯೪೮ರ ಜನವರಿ ೩೦ ರಂದು ಸಂಜೆಯ ೫ ಘಂಟೆಗೆ, ನಾಥೂರಾಮ ಗೋಡ್ಸೆ ಮೂರು ಸಲ ಅವರ ಎದೆಗೆ ಗುಂಡನ್ನು ಸಿಡಿಸಿದ್ದರಿಂದ ಸ್ಥಳದಲ್ಲಿಯೇ 'ಹೇರಾಮ್' ಎನ್ನುತ್ತಾ ಅಸುನೀಗಿದರು. ಗಾಂಧೀಜಿಯವರು ಪ್ರಾರ್ಥನಾ ಸಭೆಗೆ, ನಡೆದು ಬಂದು ವೇದಿಕೆಯನ್ನು ಹತ್ತುವಾಗ ಗೋಡ್ಸೆ ಈ ದುಷ್ಕೃತ್ಯವನ್ನೆಸಗಿದನು.

ಅದೇ ಸಂಜೆ ಮದ್ರಾಸದಿಂದ ಹಿಂತಿರುಗಿದ ಲಾರ್ಡ ಮೌಂಟ್ ಬ್ಯಾಟನ್‌ರು ಬಿರ್ಲಾಭವನಕ್ಕೆ ಧಾವಿಸಿದರು. ಸಚಿವರೆಲ್ಲರೂ ಹಾಜರಾಗಿದ್ದರು. ಕತ್ತಲೆಯಲ್ಲಿ ಮೌಂಟ್‌ಬ್ಯಾಟನ್‌ರನ್ನು ಯಾರೂ ಗುರುತಿಸಲಿಲ್ಲ. ಅವರು ತಡವರಿಸುತ್ತ ಬೆಳಕಿದ್ದ ಬಾಗಿಲ ಕಡೆ ಹೋದಾಗ ಯಾರೋ ದೊಡ್ಡ ಧ್ವನಿಯಿಂದ "ಗಾಂಧೀಜಿಯನ್ನು ಕೊಂದವನು ಮುಸಲ್ಮಾನನಿರಬೇಕು" ಎಂದು ಕೂಗಿದನು. ಆಗ ಗವ್ಹರ್ನರಜನರಲ್ ಮೌಂಟ್‌ಬ್ಯಾಟನ್‌ರು "ಮೂರ್ಖನೇ, ಗಾಂಧೀಜಿಯವರನ್ನು ಕೊಂದವನು ಹಿಂದೂ" ಎಂದು ಕೂಗಿದರು. ಆಗ ಗುಜುಗುಜು ಮಾಡುತ್ತಿದ್ದವರು ಮೌನವಾದರು. ಮೌಂಟ್‌ಬ್ಯಾಟನ್‌ರ ಜೊತೆಯಿದ್ದ ಮಿ. ಅಲನ್ ಕ್ಯಾಂಪಬೆಲ್ ಜಾನ್‌ಸನ್‌ರು ಮೌಂಟ್ ಬ್ಯಾಟನ್‌ರ ಕಿವಿಯಲ್ಲಿ "ನೀವು ಅವನು ಹಿಂದೂವೆಂದು ಹೇಗೆ ಖಚಿತವಾಗಿ ಹೇಳುತ್ತೀರಿ? ಎಂದು ಉಸುರಿದರು. ಆಗ ಮೌಂಟ್ ಬ್ಯಾಟನ್‌ರು "ನಾವಂತೂ ಅವರನ್ನು ಕಳೆದು ಕೊಂಡಿದ್ದೇವೆ. ಜನರೀಗ ದಂಗೆ ಏಳಬಹುದು" ಎಂದರು. ನಂತರ ಅವರು ಈ ಘಟನೆಯನ್ನು ದಾಖಲಿಸುತ್ತಃ

"ಈ ಸಂಧಿಯನ್ನು ಬಳಸಿಕೊಂಡು ಬಿರ್ಲಾ ಭವನದಲ್ಲಿ ನಾನು ಪಂಡಿತ ನೆಹರೂ ಮತ್ತು ಸರದಾರ ಪಟೇಲರೊಡನೆ ಮಾತನಾಡಿದೆ. ಗಾಂಧೀಜಿಯವರು ನನ್ನನ್ನು ಅತ್ಯಂತ ವಿಶ್ವಾಸದಲ್ಲಿ ತೆಗೆದುಕೊಂಡಿದ್ದರು. ಪಟೇಲರಿತ್ತಿರುವ ರಾಜೀನಾಮೆಯ ಬಗ್ಗೆ ಕೂಡ ನಾನು ಚರ್ಚಿಸಿದೆ. ಗಾಂಧೀಜಿಯವರ ಅಶೋತ್ತರಗಳನ್ನು ಈಡೇರಿಸುವ ನೈತಿಕ ಹೊಣೆ ನನ್ನ ಮೇಲಿದೆ ಎಂದು ನಾನು ಭಾವಿಸಿದ್ದೇನೆ. ಆದುದರಿಂದ ನೀವಿಬ್ಬರೂ ಸೇರಿ ಇಂದು ಬಾನುಲಿಯಲ್ಲಿ ಬಿತ್ತರಿಸುವ ಶೋಕ ಸಂದೇಶದಲ್ಲಿ ಪಾಲ್ಗೊಳ್ಳಬೇಕು. ಗಾಂಧೀಜಿಯವರ ಸಾವು ನಿಮ್ಮನ್ನು ಸಮೀಪಕ್ಕೆ ತಂದಿದೆ. ಈ ಸುದ್ದಿಯನ್ನು ಕೇಳಿ ತತ್ತರಿಸುವ ಜನರಿಗೆ ನೀವಿಬ್ಬರೂ ಸೇರಿ ಮಾತನಾಡಿದರೆ, ಅವರ ದುಃಖವು ಸ್ವಲ್ಪ ಮಟ್ಟಿಗೆ ಶಮನವಾಗುವುದಲ್ಲದೆ, ನೀವು ಹೆಗಲಿಗೆ ಹೆಗಲು ಹಚ್ಚಿ ಕಾರ್ಯಮಾಡುವರೆಂಬ ಭರವಸೆ ಮೂಡುವದು".

ಮೌಂಟಬ್ಯಾಟನ್‌ರು ಪಂಡಿತ ನೆಹರೂರವರಿಗೆ ಹಿಂದಿನದೆಲ್ಲವನ್ನೂ ಮರೆತು ಮುಂದಡಿ ಇಡಬೇಕು ಎಂದು ಹೇಳಿದರು. ಆಗ ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿ-ಕೊಂಡು ವಿರಸವನ್ನು ಮರೆತಾಗ, ಅವರಿಬ್ಬರ ಕಣ್ಣುಗಳಲ್ಲಿ ಅಶ್ರುಗಳ ಸುರಿಯುತ್ತಿದ್ದವು. ಆಗ ಅವರಿಬ್ಬರೂ ಸೇರಿ ಮುಂದಿನ ಕಾರ್ಯಕ್ಕೆ ಉದ್ಯುಕ್ತರಾದರು.

"ರಾಷ್ಟ್ರದಾದ್ಯಂತ 13 ದಿವಸಗಳ ಶೋಕಾಚರಣೆಯನ್ನು ಮಾಡಬೇಕೆಂದು ತಿಳಿಸಲಾಯಿತು. ಜಗತ್ತಿನ ಮೂಲೆ ಮೂಲೆಗಳಿಂದ ಶೋಕ ಸಂದೇಶಗಳು ಬರಹತ್ತಿದವು. ಎಲ್ಲ ಸಂದೇಶಗಳಲ್ಲಿಯೂ ಗಾಂಧೀಜಿಯವರ ಜಾತ್ಯತೀತ ಧೋರಣೆ ಮತ್ತು ಮುಸಲ್ಮಾನರ ಮೇಲಿಟ್ಟಿದ್ದ ಪ್ರೀತಿಯನ್ನು ಪ್ರಶಂಸಿಸಿದ್ದರು. ಆದರೆ ಅದರಲ್ಲಿ ಒಂದೇ ಒಂದು ಸಂದೇಶವು ಅಪಶ್ರುತಿಯಿಂದ ಕೂಡಿತ್ತು. ಅದು ಜಿನ್ನಾರವರದು. ಅವರು "ಹಿಂದೂ ಸಮಾಜವು ಅತ್ಯಂತ ಶ್ರೇಷ್ಠ ಮಾನವತಾವಾದಿಯನ್ನು ಜಗತ್ತಿಗೆ ಕೊಟ್ಟಿತು. ಇವರು ಅವರ ವಿಶ್ವಾಸ, ಗೌರವ, ಪ್ರೀತಿಗಳನ್ನುಗಳಿಸಿದ್ದರು ಎಂದಿದ್ದರು". ಮೇಲಿನ ಮಾತುಗಳನ್ನು ದಾಖಲಿಸಿದವರು ವ್ಹಾಯಿಸ್‌ರಾಯ್ ಲಾರ್ಡ್ ಮೌಂಟಬ್ಯಾಟನ್.

ಗಾಂಧೀಜಿಯವರ ಆತ್ಮವು ಪಂಚಮಹಾಭೂತಗಳಲ್ಲಿ ಲೀನವಾಗಿ, ಅವರ ಪಾರ್ಥಿವ ಶರೀರವು ರಾಜಘಾಟದಲ್ಲಿ ಲೀನವಾಯಿತು. ಒಂದು ದೃಷ್ಟಿಯಲ್ಲಿ ಭಾರತದ ಮಹಾ ಜ್ಯೋತಿ ನಂದಿತು. ಪುಣ್ಯವು ತೀರಿತು.

## ಸತ್ಯನಿಷ್ಠೆ

ಮಹಾತ್ಮಾ ಗಾಂಧಿ ಅವರ ಶ್ರೇಷ್ಠ ಕ್ಷಣಗಳೆಂದರೆ ಅವರ ಜೀವನದ ಅಂತಿಮ ಕೆಲ ತಿಂಗಳುಗಳು, 1947 ಆಗಸ್ಟ್-ಸಪ್ಟೆಂಬರ್‌ದಲ್ಲಿ ಕಲಕತ್ತಾ ಮತ್ತು ಬಂಗಾಲದಲ್ಲಿ ತಲೆ ಎತ್ತಿದ ಕೋಮುವಾದ ದ್ವೇಷಗಳನ್ನು ಕಡಿಮೆಮಾಡಿ ಶಾಂತಿಯನ್ನು ತರಲು ಅವರು ಸತತ ಶ್ರಮಿಸಿದರು. ದಲಿತ ಜನಾಂಗಗಳ ಮೂಕ ಸಂಕಟಗಳ ಮೂರ್ತ ಸ್ವರೂಪರಾಗುವ ಎತ್ತರಕ್ಕೇರಿದ್ದ ಗಾಂಧೀಜಿ ಸತತ ಸತ್ಯಾನ್ವೇಷಣೆಯಲ್ಲಿ ತೊಡಗಿದ್ದರು. ಅವರ ದೃಷ್ಟಿಯಲ್ಲಿ ವಿಚಾರ ಪರಿವರ್ತನೆಗಿಂತ ಹೃದಯ ಪರಿವರ್ತನೆಗೆ ಹೆಚ್ಚಿನ ಬೆಲೆಯಿತ್ತು.

ಮಹಾತ್ಮರು ಕೊನೆಯ ದಿನಗಳಲ್ಲಿ ವ್ಹಾಯಿಸರಾಯ್ ಲಾರ್ಡ್ ಮೌಂಟ್ ಬ್ಯಾಟನ್‌ರೊಂದಿಗೆ ಮುಕ್ತವಾಗಿ ತಮ್ಮ ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದರು. ಮಹಾತ್ಮರ ಕೊನೆಯ ದಿವಸಗಳ ಬಗ್ಗೆ ಅವರು ತಮ್ಮ ಸ್ಮೃತಿಗಳಲ್ಲಿ ಹೇಳುತ್ತಾರೆ, "ಗಾಂಧೀಜಿಯವರ ಸಾವು ಎಷ್ಟು ದುರಂತವೋ ಅಷ್ಟೇ ಯೋಗ್ಯವೆನ್ನಬಹುದು.

ಕಾರಣ, ಯಾರನ್ನು ಅವರು ಪ್ರೀತಿಸಿದರೋ ಮತ್ತು ಯಾರು ಅವರನ್ನು ಪ್ರವಾದಿ, ಸಂತ, ತಂದೆಯೆಂದು ಭಾವಿಸಿದ್ದರೋ ಅಂತಹವರಲ್ಲಿ ಜಾತಿ ದ್ವೇಷ ದಿಂದ ಪ್ರೇರೇಪಿತನಾದ ಒಬ್ಬನು ಗಾಂಧೀಜಿಯವರನ್ನು ಕೊಲೆ ಮಾಡಿ, ಮಾನವ ಆದರ್ಶಗಳಿಗೆ ಅವರನ್ನು ಹುತಾತ್ಮರನ್ನಾಗಿ ಮಾಡಿದನು. ಯಾವ ದೇಶದಲ್ಲಿ ಶಾಂತಿ-ಅಹಿಂಸೆಗಳು ಗೌರವಿಸಲ್ಪಡುತ್ತಿದ್ದವೋ ಆ ದೇಶದಲ್ಲಿ ಅವೀಗ ಬಾಡಿ ಹೋಗಿವೆ. ಗಾಂಧೀಜಿಯವರ ಜಾತ್ಯತೀತ ಆದರ್ಶಗಳ ಮೇಲೆ ನೆಹರೂ ಧರ್ಮ ನಿರಪೇಕ್ಷ ರಾಷ್ಟ್ರವನ್ನು ಕಟ್ಟಲು ಹೊರಟಿದ್ದಾರೋ ಅಲ್ಲಿಯೇ ಗಾಂಧೀಜಿ ತಮ್ಮ ಜೀವಕ್ಕಾಗಿ ಹೋರಾಡಬೇಕಾಯಿತು".

ದೇಶಕ್ಕೆ ಸ್ವಾತಂತ್ರ್ಯವು ದೊರೆತೊಡನೆ ಗಾಂಧೀಜಿ ಭಾರತದ ರಂಗಮಂಚದಿಂದ ಮರೆಯಾದುದ್ದು ಯೋಗ್ಯವೇನೋ ಎಂದೆನಿಸುತ್ತದೆ. ಕಾಂಗ್ರೆಸ್ಸಿನ ಮುಂದಿರುವ ಕಾರ್ಯಭಾರ ಬದಲಾಗಿದೆ. ಅವರೀಗ ಯಾವ ಸರಕಾರವನ್ನೂ ವಿರೋಧಿಸಬೇಕಿಲ್ಲ, ಸರಕಾರವನ್ನು ಆಳಬೇಕಿದೆ, ಅವರೀಗ ಧರ್ಮೋಪದೇಶ ಮಾಡಬೇಕಿಲ್ಲ; ಆದರೆ ಆಡಳಿತವನ್ನು ನಡೆಸಬೇಕಿದೆ. ಅವರೀಗ ಒಂದೇ ಧೋರಣೆಯನ್ನು ತಾಳಬೇಕಿಲ್ಲ, ಕೆಲವರಿಗೆ ಸಹಾಯ ಮಾಡಲು ಕೆಲವರ ಮನಸ್ಸನ್ನು ನೋಯಿಸುವ ಅನೇಕ ಧೋರಣೆಗಳನ್ನು ರೂಪಿಸಬೇಕಿದೆ. ಗಾಂಧೀಜಿ ಯಾವ ಪಕ್ಷದ ಸದಸ್ಯರೆಂದು ತಲೆಪಟ್ಟಿ ಹಚ್ಚಿಕೊಳ್ಳಲು ಸಿದ್ಧರಿರಲಿಲ್ಲ. ಗಾಂಧೀಜಿ ಸೇವಾಗ್ರಾಮ ಆಶ್ರಮದಲ್ಲಿದ್ದಾಗ ಲೇಖಕರೊಬ್ಬರು ಪೂರ್ಣಾಧಿಕಾರ ಪಡೆದ ಕಾಂಗ್ರೆಸ್ಸಿನ ಭವಿತವ್ಯವೇನು ? ಎಂದು ಕೇಳಿದರು. ಆಗ ಗಾಂಧೀಜಿ "ಸ್ವಾತಂತ್ರ್ಯವನ್ನು ಸಾಧಿಸಲು ಕಾಂಗ್ರೆಸ್ಸಿನ ಅವಶ್ಯಕತೆ ಇದೆ. ಸ್ವಾತಂತ್ರ್ಯ ಬಂದ ಮೇಲೆ ವಿರೋಧಾತ್ಮಕ ಅಭಿಪ್ರಾಯ-ಧೋರಣೆಗಳನ್ನು ಹೊಂದಿದ ಹಲವಾರು ರಾಜಕೀಯ ಪಕ್ಷಗಳು ಹುಟ್ಟಿಕೊಳ್ಳುತ್ತಿವೆ. ಆಗ ಕಾಂಗ್ರೆಸ್ ಪಕ್ಷವು ರಾಷ್ಟ್ರೀಯ ಭಾವನೆಯ ಸಾಕಾರಮೂರ್ತಿಯಾಗಿ, ಅಹಿಂಸೆಯನ್ನು ರಕ್ಷಿಸುತ್ತ ಬಡವರ, ಶೋಷಿತರ, ಜೀತದಾಳುಗಳ ಹಿತಾಸಕ್ತಿಗಳನ್ನು ಕಾಪಾಡಬೇಕಲ್ಲದೆ, ಸರಕಾರದಿಂದ ಅದು ದೂರಿರಬೇಕು. ತನ್ನ ಕಾರ್ಯಕ್ರಮಗಳಿಗೆ ಅದು ತನ್ನ ಪಕ್ಷದ ಸಹಾಯವನ್ನು ಪಡೆಯಬೇಕು" ಎಂದರು.

ಗಾಂಧೀಜಿ ತೀರಿಕೊಂಡ ಬಳಿಕ ಒಂದೇ ವರುಷದಲ್ಲಿ ಸರದಾರ ಪಟೇಲರು ಅಸುನೀಗಿದರು. ನಂತರ ನೆಹರೂ ಕಾಂಗ್ರೆಸ್ ಪಕ್ಷದ ಬೆಂಬಲದಿಂದ ಸಾಯುವವರೆಗೂ ಹದಿನಾರು ವರುಷ ಈ ದೇಶದ ಪ್ರಧಾನಮಂತ್ರಿಗಳಾದರು. ಕಾಂಗ್ರೆಸ್ ಪಕ್ಷವೆ ಸರಕಾರ

ವನ್ನಾಳಿ ಗಾಂಧೀಜಿಯವರ ಧ್ಯೇಯ-ಧೋರಣೆಗಳನ್ನು ಹಾಳು ಮಾಡಿತು. ಕಾಂಗ್ರೆಸ್ ತನ್ನ ದ್ವಿತ್ವ ಧೋರಣೆಯಿಂದ ಒಳ್ಳೆಯದೂ ಎನಿಸಿಕೊಂಡಿತು. ಕೆಟ್ಟದ್ದೂ ಎಂದೆನಿಸಿತು!

1948 ಜನವರಿ 20 ರಂದು ಗಾಂಧೀಜಿಯ ಅಮಾನುಷ ಹತ್ಯೆಯ ತರುವಾಯ ಮತೀಯ ಧೋರಣೆಯನ್ನು ಹೊಂದಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಮುಸ್ಲಿಂ ಲೀಗ್ ನ್ಯಾಶನಲ್ ಗಾರ್ಡ್ಸ್ ಹಾಗೂ ಖಾಕ್‌ಸಾರ ಪಕ್ಷಗಳನ್ನು ಸರಕಾರ ನಿಷೇಧಿಸಿತು. ಹಿಂದೂ ಮಹಾಸಭಾ ಆಗಲಿ ಮುಸ್ಲಿಂ ಲೀಗ್ ಆಗಲಿ ತಮ್ಮ ತಮ್ಮ ಸಂಸ್ಥೆಗಳನ್ನು ವಿಸರ್ಜಿಸಲಿಲ್ಲ. ಹಿಂದೂ ಮಹಾಸಭಾ ತನ್ನ ರಾಜಕೀಯ ಚಟುವಟಿಕೆಗಳನ್ನು ಸ್ಥಗಿತಗೊಳಿಸುವ ನಿರ್ಣಯ ಕೈಗೊಂಡರೆ ಮುಸ್ಲಿಂ ಲೀಗ್ ತಾನು ಹೊಸ ಘಟನೆ-ಯನ್ನು ರೂಪಿಸಿಕೊಳ್ಳುವುದಾಗಿ ಹೇಳಿತು.

ಪತ್ರಕರ್ತರೊಬ್ಬರು ಒಂದು ಬಾರಿ ಗಾಂಧೀಜಿಗೆ "ಭಾರತವು ಇಂದಿನ ಸ್ಥಿತಿ-ಯನ್ನು ಹೊಂದಲು ನಿಮ್ಮ ಧ್ಯೇಯಗಳನ್ನವಲಂಬಿಸದ ಕಾರ್ಯಕ್ರಮಗಳು ಕಾರಣ-ವಲ್ಲವೇ ? ಇಷ್ಟು ಎತ್ತರ ಏರಿದ ಏಣಿಯನ್ನು ಒದೆದು ತಳ್ಳುತ್ತಿರುವವೆಂಬುದು ಸ್ಪಷ್ಟ ವಾಗಿಲ್ಲವೆ ? ಹಿಂದೂ-ಮುಸಲ್ಮಾನರ ಐಕ್ಯ. ಗ್ರಾಮ ಕೈಗಾರಿಕೆ ಈಗೆಲ್ಲಿ ಹೋಗಿವೆ ? ಗಾಂಧೀಜಿಯವರನ್ನು ಕಾಂಗ್ರೆಸ್ ಮುಖಂಡರು ಜೀವಂತವಾಗಿ ಹೂಳಿಲ್ಲವೆ ? ಎಂದು ದೂರಿದ್ದರು.

"ನಾನು ಜೀವಂತವಾಗಿ ಹೂಳಲ್ಪಟ್ಟಿಲ್ಲವೆಂಬ ನಂಬಿಕೆಗೆ ಅಂಟಿಕೊಂಡಿದ್ದೇನೆ. ಜನರು ನನ್ನ ನಿಷ್ಠೆ ಪ್ರಖರವಾಗಿದೆಯೋ ಅಲ್ಲಿಯವರೆಗೂ ನಾನು ಜೀವಂತ ಇರುತ್ತೇನೆ. ಸಮಾಧಿಯಲ್ಲಿ ಕೂಡ ನಾನು ಬದುಕಿರುತ್ತೇನೆ. ಅಲ್ಲಿಂದ ಮಾತನಾಡುತ್ತೇನೆ. ಜನತೆ ಒಂದು ವಿಮರ್ಶಕ ಪ್ರವೃತ್ತಿಯನ್ನು ತೋರಿಸುತ್ತದೆ. ಇವರ ಮನೋಭಾವದಲ್ಲಿಯ ಬದಲಾವಣೆಯನ್ನು ನಿರ್ಲಕ್ಷಿಸಬಾರದು. ಪರಿಸ್ಥಿತಿ ಉತ್ತಮಗೊಳ್ಳದೆ ಈಗಿನಂತೆಯೇ ಮುಂದುವರೆದರೆ ಮುಂಬರುವ ಬಿರುಗಾಳಿಯನ್ನು ತಡೆಯುವುದು ಅತಿ ಕಷ್ಟ" ಎಂದರು ಗಾಂಧೀಜಿ. ಅವರ ಈ ಎಚ್ಚರಿಕೆಯನ್ನು ಯಾರೂ ಲಕ್ಷಿಸಲಿಲ್ಲ. ನಮ್ಮ ದುರ್ದೈವ! ಎಂದಿಗೂ ನಾಶವಾಗದ ಗಾಂಧೀಜಿಯ ನೆನಪು ಅವರ ಅಮರ ಸಂದೇಶ ಸದಾ ನಮ್ಮೊಂದಿಗಿರುತ್ತದೆ.



# ಪಾದುಕಾ ಪ್ರಭಾವ

ಚಂದ್ರಶೇಖರಯ್ಯ, ನಂ. 1165, "ಶಾಶ್ವತಿ", ಟಿ. ಕೆ. ಬಡಾವಣೆ, 4ನೇ ಹಂತ,
ಮೈಸೂರು-570023.

[ಹಿನ್ನೆಲೆಯಲ್ಲಿ ಸುಶ್ರಾವ್ಯವಾಗಿ ಹಾಡುತ್ತಿರುವ ಈ ಹಂತಿಯ ಪದ ಕೇಳಿಬರುತ್ತದೆ.

ತನುಮನ ಧನ ಸವೆಸಿ ಮನೆಯ ಕಾಯಕಮಾಡಿ ।
ಅನುಭಾವಿಯಾದ ಹರಳಯ್ಯ-ಮಂಟಪಕೆ ।
ಮಣಿಮಾಲೆಯಾದ ಶಿವಮತಕೆ ॥

ನಂತರ-ಹರಳಯ್ಯ ಪಾದರಕ್ಷೆಮಾಡುವ ಕಾಯಕದಲ್ಲಿ ನಿರತನಾಗಿರುವುದರಿಂದ ಹದಮಾಡಿದ ಚರ್ಮವನ್ನು ತಟ್ಟುವ, ಬಡಿಯುವ, ಮೊಚ್ಚೆಗಾರರ ಉಳಿಯನ್ನು ಮಸೆಯುವ ಇತ್ಯಾದಿ ಶಬ್ದಗಳು ಕೇಳುತ್ತವೆ].

**ಹರಳಯ್ಯ :** (ತನಗೆ ತಾನೆ-ದೀರ್ಘವಾಗಿ, ಕೊಂಚ ರಾಗವಾಗಿ, ಎಳೆಯುತ್ತ) ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಕಂಭವನೆಟ್ಟು, ಆಗು ಭೋಗೆಂಬ ದಡಿ-ಗೋಲಿನಲ್ಲಿ, ಆಗಡದ ಎಮ್ಮೆಯ ಚರ್ಮವ ತೆಗೆದು, ಉಭಯ ನಾಮವೆಂಬ ನಾರಿನಲ್ಲಿ ತತ್ತಿಯನೊಪ್ಪವ ಮಾಡಿ, ಭಾವವೆಂಬ ತಿಗುಡಿನಲ್ಲಿ ಸರ್ವಸಾರವೆಂಬ ಖಾರದ ನೀರ ಹೊಯಿದು, ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯವರಿಗೆ ಮುಟ್ಟಿಸಬಂದೆ .... .... ಮೆಟ್ಟುವವರು ಮೆಟ್ಟಿಕೊಳ್ಳಿ, ನಾಮಾಡಿದ ಭವದುರಿಯ ದಾಟಿಸುವ ಮೆಟ್ಟು.

(ಅಷ್ಟರಲ್ಲಿ – ಬೀದಿಯಲ್ಲಿ, ಬಸವಣ್ಣನವರು ಆಗಮಿಸುತ್ತಿದ್ದಾರೆಂದು ತಿಳಿದು ಅವರನ್ನು ನೋಡಲು ಉತ್ಸುಕರಾಗಿರುವ ಜನರಿಂದ ಅಗೋ! ಅಲ್ಲಿ! ಬಸವರಸರು! ಅಣ್ಣನವರಿಗೆ ಶರಣು ........! ಶರಣು! ಬಸವಾ ಶರಣು!, ಇತ್ಯಾದಿ ಮಾತುಗಳು ಹಿನ್ನೆಲೆಯಲ್ಲಿ ಕೇಳಿ ಅಡಗುತ್ತವೆ. ನಂತರ ಕಲ್ಯಾಣಮ್ಮನ ಪ್ರವೇಶ)

**ಕಲ್ಯಾಣಮ್ಮ:** (ಹರಳಯ್ಯನನ್ನು ಕುರಿತು) ಒಡೆಯರೆ .... .... ತಮಗೆ ಕೇಳಿಸುತ್ತಿಲ್ಲವೆ!? ಓ, ನೀವು ಕಾಯಕದಲ್ಲಿ ನಿರತರಾದಿರೆಂದರೆ ಮುಗಿಯಿತು! ಅದರಲ್ಲೆ ಲೀನವಾಗಿಬಿಡುತ್ತೀರಿ .... ....

**ಹರಳಯ್ಯ :** ಏನು, ಕಲ್ಯಾಣಿ? ಅಹುದೆ........ ಇರಲಿ ........ ನನಗೆ ಏನೊಂದೂ ಕೇಳಿಸಲಿಲ್ಲ ........

**ಕಲ್ಯಾಣಮ್ಮ:** ವಿಭೂತಿಪುರುಷ, ವಿಶ್ವಾತ್ಮ ಸಂಗನ ಬಸವರಸರು ನಮ್ಮ ಬೀದಿಯಲ್ಲೇ ಬರುತ್ತಿದ್ದಾರೆ ........ "ಶರಣು" ಎಂದವರಿಗೆ ಶರಣು ಎಂದುಕೊಂಡು ಅವರನ್ನು ಇದಿರುಗೊಳ್ಳಲು ಬೀದಿಯಲ್ಲಿ ನೂಕು ನುಗ್ಗಲು ....!!

**ಹರಳಯ್ಯ :** ಅಹುದೆ ! ? ಎಂತಹ ಪ್ರಮಾದವಾಯಿತು.... (ಕೆಲಸಕ್ಕೆ ಬಳಸುತ್ತಿದ್ದ ಉಳಿ ಬಡಿಗೆ ಇತ್ಯಾದಿಗಳನ್ನು ಸರಿಸಿ ಇಟ್ಟು ಮೇಲೇಳುವ ಶಬ್ದ)ಇಗೊ ಹೊರ ....ನಡಿ ಇಬ್ಬರೂ ಹೋಗಿ ಅಣ್ಣನವರಿಗೆ ಶರಣು ಮಾಡಿ ಬರ್ೋಣ (ಮತ್ತೊಮ್ಮೆ ಬೀದಿಯಲ್ಲಿನ ಅಸ್ಪಷ್ಟ ಮಾತಿನ ಪುನರಾವರ್ತನೆ.... ಅದರ ನಡುವೆಯೆ....)

**ಹರಳಯ್ಯ :** ಪಾವನಮೂರ್ತಿ ಬಸವಯ್ಯಾ ಶರಣು........

**ಬಸವಣ್ಣ :** (ಉತ್ತರವಾಗಿ) ಹರಳಯ್ಯನವರೆ — ಶರಣು ಶರಣಾರ್ಥಿ........ (ಬೀದಿಯಲ್ಲಿನ ಶಬ್ದ ಈಗ ಸಂಪೂರ್ಣ ಕೇಳದಂತಾಗುತ್ತದೆ.)

**ಹರಳಯ್ಯ :** ಕಲ್ಯಾಣಮ್ಮನನ್ನು ಕುರಿತು-ದುಗುಡ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾ) ಕಲ್ಯಾಣೀ........ ಕೇಳಿದೆಯಾ........? ನಾನು, ಒಮ್ಮೆ ಶರಣೆಂದುದಕ್ಕೆ ಅಣ್ಣನವರು 'ಶರಣು ಶರಣಾರ್ಥಿ' ಎಂದು ಎರಡು ಬಾರಿಹೇಳಿ ನನ್ನ ಮೇಲೆ ಒಂದು ಶರಣಿನ ಭಾರ ಹೊರಿಸಿ ಹೋದರಲ್ಲ........! ಅದನ್ನು ನಾನು ತೀರಿಸುವುದಾದರೂ ಎಂತು? ಇನ್ನೊಮ್ಮೆ ಇಂತಹ ಅವಕಾಶ ಯಾವಾಗ ಬರುತ್ತದೊ? —... ಅದುವರೆಗೆ ಕಾಯುವುದು ನನ್ನಿಂದ ಸಾಧ್ಯವಿಲ್ಲ –– (ಸ್ವಲ್ಪ ತಡೆದು) ಕಲ್ಯಾಣಿ, ಅವರು ಶರಣು ಶರಣಾರ್ಥಿ ಎಂದಾಗ ನನಗೇನಾಗಿತ್ತು ! ಕಲ್ಲಿನಂತೆ ನಿಂತುಬಿಟ್ಟೆನಲ್ಲ! ಆಕೂಡಲೆ ಹಾರಿಹೋಗಿ ನಾನವರ ಪಾದದಮೇಲೆ ಬಿದ್ದು ಹೊರಳಾಡ ಬಾರದಿತ್ತೆ! ? ಅಯ್ಯೋ, ಹರಳ — ನಿನಗೆಂಥ ಮಂಕು ಮರವೆ ಕವಿದಿತ್ತು!

**ಕಲ್ಯಾಣಮ್ಮ :** ಹೋಗಲಿ ಬಿಡಿ, ಅದಕ್ಕೇಕೆ ಇಷ್ಟು ಮರುಗಿ ವ್ಯಥೆಪಡುತ್ತೀರಿ........ ಅಣ್ಣನವರು ನಮ್ಮ ಮೇಲೆ ಹೊರಿಸಿದ ಹೆಚ್ಚಿನ ಶರಣನ್ನು ತೀರಿಸುವ ಬಗೆ........ (ಮಾತು ಮುಗಿಯುವ ಮುನ್ನವೆ)

**ಹರಳಯ್ಯ :** ಅಹುದು, ಅಹುದು.... ಹೆಚ್ಚಿನ ಶರಣನ್ನು ತೀರಿಸಲೇಬೇಕು– ಏನಾದರೊಂದು ಉಪಾಯ ಹೊಳೆದರೆ ಹೇಳು, ಕಲ್ಯಾಣಿ........

**ಕಲ್ಯಾಣಮ್ಮ :** ಅದನ್ನೇ ನಾನೀಗ ಯೋಚಿಸುತ್ತಿರುವುದು........ ನನಗೆ, ಹೀಗೆ ಮಾಡಿದರೆ ಸರಿಯೆನ್ನಿಸುತ್ತದೆ........ ನೀವೇನು ಹೇಳುತ್ತೀರೊ........!

**ಹರಳಯ್ಯ :** ಮೊದಲು ಅದೇನೆಂದು ಹೇಳು, ಕಲ್ಯಾಣಿ, ನಿನ್ನ ಸಲಹೆಯನ್ನು ನಾನು ಒಪ್ಪದಿರುತ್ತೇನೆಯೆ........

**ಕಲ್ಯಾಣಮ್ಮ :** ಈಗ ನಾವು ಒಂದು ಜೊತೆ ಚಮ್ಮಾವುಗೆಗಳನ್ನು ಮಾಡಿಕೊಂ ಕೂಡಲೇ ಹೋಗಿ ಅಣ್ಣನವರ ದಿವ್ಯಪಾದಗಳಿಗೆ ಅರ್ಪಿಸಿ ನಮ್ಮ ಮೇಲಿರುವ ಹೊರೆಯನ್ನು ಇಳಿಸಿಕೊಂಡು ಕ್ಷಮಿಸುವಂತೆ ಕೇಳಿದರೆ ಹೇಗೆ! ? ಅದು ಸರಿಯಾಗುವುದಿಲ್ಲವೆ?

ಹರಳಯ್ಯ : ನಿನ್ನ ಸಲಹೆಯನ್ನೇನೊ ಒಪ್ಪುತ್ತೇನೆ ........ ಆದಕ್ಕೆ, ಚಮ್ಮಾವುಗೆಗಳನ್ನು ಮಾಡಿಕೊಡುವುದೇ ನಮ್ಮ ಕಾಯಕ ........ ಇದರಲ್ಲೇನು ವಿಶೇಷ ಬಂದೀತು? ನಮ್ಮ ತಪ್ಪಿನ ಅರಿವಿನ ಪಶ್ಚಾತ್ತಾಪವನ್ನು ವ್ಯಕ್ತಪಡಿಸುವಂತಹುದೇನನ್ನಾದರೂ ಮಾಡಿದರೆ ಯೋಗ್ಯವೆನಿಸುವುದಿಲ್ಲವೆ?

ಕಲ್ಯಾಣಮ್ಮ: ಹಾಗಾದರೆ ........ ಅಣ್ಣನವರಿಗೆಂದು ನಾವು ಮಾಡುವ ಚಮ್ಮಾವುಗೆಗಳ ಮೇಲು ಹೊದಿಕೆಗೆ ನಮ್ಮಿಬ್ಬರ ಮೈಯಿಂದ ತೆಗೆದ ಚರ್ಮವನ್ನೇ ಹದಮಾಡಿ ಬಳಸಿ ಸುಪ್ಪಾಣಿಯಿಂದ ನಯವಿಟ್ಟು ಒಪ್ಪಿಸಿದರೆ ಹೇಗೆ?

ಹರಳಯ್ಯ : (ಅಪಾರ ಆಶ್ಚರ್ಯ ಮೆಚ್ಚುಗೆಯಿಂದ) ಭಲೆ, ಕಲ್ಯಾಣೀ, ಭಲೆ, ........ ತಪ್ಪಿನ ಅರಿವು ನನ್ನನ್ನೇ ಹೆಚ್ಚು ಚಿಂತೆಗೆ ಗುರಿಮಾಡಿದೆ ಎಂದುಕೊಂಡಿದ್ದೆ. ಈಗ ನನಗಿಂತ ನೀನೇ ಹೆಚ್ಚುನೊಂದವಳಿದ್ದೀಯೆ ........ ನಿನ್ನಸಲಹೆ ನನಗೂ ಒಪ್ಪಿಗೆ. ಹಾಗೆಯೇ ಮಾಡೋಣ. ನಮ್ಮ ಕಾಯಕದ ಕೌಶಲವನ್ನೆಲ್ಲಾ ಧಾರೆ ಎರೆದು ಈ ಚಮ್ಮಾವುಗೆಗಳನ್ನು ಮಾಡೋಣ. ಶಿವನೊಲಿದರೆ ಯಾವುದು ತಾನೆ ಅಸಾಧ್ಯ!?

[ಹಿನ್ನೆಲೆಯಲ್ಲಿ ಅಂತಿಯಪದ

ಮರುದಿವಸೆ ಹರಳಯ್ಯ ಕೊರೆದ ಬಲದೊಡೆಚರ್ಮ
ಹರನೆಂದು ಮಡದಿಯೆಡದೊಡೆಯತ್ತಾಕೊಯ್ದು
ಭರದಿಹದಮಾಡಿ ಒಣಗಿಸಿದ ||]

ದೃಶ್ಯ :–೨ [ಬಸವಣ್ಣನವರ ಮಹಾಮನೆ–ಹಿನ್ನೆಲೆಯಲ್ಲಿ ಅವರ ಸಂದರ್ಶನಕ್ಕಾಗಿ ಬಂದವರು ಮಾತನಾಡಿಕೊಳ್ಳುವ ಶಬ್ದ–ನಂತರ]

ಹರಳಯ್ಯ : (ಕಲ್ಯಾಣಮ್ಮನನ್ನು ಕುರಿತು) ಅಗೊ, ನೋಡಿದೆಯ ಬಸವರಸರ ಮಹಾಮನೆ, ಶಿವಶರಣರ ತವರುಮನೆಯ ಮುಂದಿನ ದೃಶ್ಯವನ್ನು! ನಿತ್ಯವೂ ಅವರ ಸಂದರ್ಶನಕ್ಕೆ ನೂರಾರು ಜನರು ನಾಡಿನ ಮೂಲೆ ಮೂಲೆಯಿಂದ ಬರುತ್ತಾರೆ ಕಲ್ಯಾಣಿ. ಅಹುದು, ಆದರೆ....ಈ ಸಂದಣಿಯನ್ನು ನೋಡಿದರೆ ನಾವು ಮಾಡಿಕೊಂಡು ಬಂದಿರುವ ಚಮ್ಮಾವುಗೆಗಳನ್ನು ಬಸವರ ಪಾದಕೊಪ್ಪಿಸಿ ಶರಣೆಂದು ಬರಲು ನಮಗೆ ಅವಕಾಶ ದೊರೆಯುವುದೇ?

ಕಲ್ಯಾಣಮ್ಮ: ನೀವೇಕೆ ಇಷ್ಟು ಕಳವಳ ಪಡುತ್ತೀರಿ....ನಿಮ್ಮ ಉದ್ವೇಗಕ್ಕೆ ಕಾರಣವೇ ಇಲ್ಲ....ಒಂದು ಶರಣಿಗೆ ಎರಡು ಶರಣು ಹೇಳುವ ಅಣ್ಣನನ್ನು ನೋಡುವುದು ಕಷ್ಟವೇ....? ಶರಣರಿದ್ದಲ್ಲಿಯೇ ಅವರು ಇರುತ್ತಾರೆ. ಕಣ್ಣಿಗೆ ದೂರವಿದ್ದರೂ ನಾವು ಅವರ ಕರುಳಿಗೆ ಹತ್ತಿರದವರು. ಇದಕ್ಕೆ ಸಂಶಯ ಬೇಡ....ಬನ್ನಿ.

**ಹರಳಯ್ಯ :** ಆಯಿತು, ಕಲ್ಯಾಣಿ. ಹೇಗಾದರೂ ಇಂದು ಅಣ್ಣನವರನ್ನು ಕಾಣಲೇಬೇಕು. ಅವರಿಗೆ ಈ ಚಮ್ಮಾವುಗಳನ್ನು ಒಪ್ಪಿಸದೆ ಹಿಂದಿರುಗುವ ಮಾತೇ ಇಲ್ಲ....ಎಲ್ಲ ಶರಣರಂತಲ್ಲವೆ ನಾವು ಅವರಿಗೆ....

(ಮತ್ತೊಮ್ಮೆ ಹಿನ್ನೆಲೆಯ ಮಾತುಗಳು ಕೇಳುತ್ತವೆ)

**ಕಲ್ಯಾಣಮ್ಮ :** (ಆತುರ ಮತ್ತು ಸಂತೋಷ ವ್ಯಕ್ತಪಡಿಸುತ್ತ) ಒಡೆಯರೆ.... ಅಗೋ! ಅಣ್ಣ ಬಸವಣ್ಣ ನಮ್ಮನ್ನು ನಿರೀಕ್ಷಿಸುತ್ತಿದ್ದವರಂತೆ ಈ ಕಡೆಗೇ ಬರುತ್ತಿದ್ದಾರೆ. ಮತ್ತೆ, ಅವರ ಪಕ್ಕದಲ್ಲಿ ನೀಲಲೋಚನೆ ಅಮ್ಮನವರು! ಓ....ಬಂದೇಬಿಟ್ಟರು....

**ಬಸವಣ್ಣ :** ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ....ಹರಳಯ್ಯ ದಂಪತಿಗಳಿಗೆ ಶರಣು ಶರಣಾರ್ಥಿ....ಬನ್ನಿ, ನಿಮಗೆ ಹೃತ್ಪೂರ್ವಕ ಸ್ವಾಗತ.... (ನೀಲಲೋಚನೆಯನ್ನು ಕುರಿತು) ನೀಲಾ, ಶರಣೆಂದು ಶಿವಪದವಿಗೇರಲು ಇದೊಂದು ಅವಕಾಶ....(ಮಾತು ಮುಗಿಯುವ ಮುನ್ನವೆ)

**ನೀಲಲೋಚನೆ :** ಶಿವ-ಶಿವೆಯಂತಿರುವ ನಿಮ್ಮ ಪಾದಗಳಿಗೆ ಶರಣು ಶರಣಾರ್ಥಿ.... (ಹರಳಯ್ಯನಿಗೆ ಮಾತೇ ಹೊರಡದೆ ಮೂಕನಾಗಿ ನಿಲ್ಲುತ್ತಾನೆ. ಅದಕ್ಕೆ, ಬಸವಣ್ಣನವರೆ ಮತ್ತೊಮ್ಮೆ....)

**ಬಸವಣ್ಣ :** ಏಕೆ, ಹರಳಯ್ಯನವರೆ .... .... ನನ್ನಿಂದ ನಿಮಗೇನಾದರೂ, (ಮಾತುಮುಗಿಯುವ ಮುನ್ನವೆ)

**ಹರಳಯ್ಯ :** (ದುಃಖ ತುಂಬಿ ದನಿ ಏರಿಸಿ) ಬಸವಣ್ಣ....! ಸಂಗನಬಸವಣ್ಣ ಅಯ್ಯೋ, ನನಗೆ ನೀವೇನು ಮಾಡುತ್ತಿದ್ದೀರೆಂದು ಬಲ್ಲಿರಾ ....? ಈ ಹೀನಕುಲದ ಹರಳನಿಗೆ! ತಪ್ಪನ್ನು ಮನ್ನಿಸಿ ಎಂದು ಬೇಡಿ ಶರಣುಮಾಡಿ ಹೋಗಲೆಂದು ಬಂದ ನಮಗೆ ಮುನ್ನಿನ ತಪ್ಪನ್ನೇ ಇನ್ನೊಮ್ಮೆ ಮಾಡುವಂತಾಯಿತಲ್ಲ. ತಪ್ಪಿನ ಮೇಲೆ ತಪ್ಪಿನ ಹೊರೆ ಹೊರಿಸಿ ಒಪ್ಪ ಅಳಿಯುವಂತೆ ಮಾಡುತ್ತಿದ್ದೀರಲ್ಲಾ ........ ಶಿವನೇ, ಈ ನನ್ನ ನಾಲಿಗೆಗೆ ಏನಾಗಿದೆ? ನಿಮ್ಮನ್ನು ಕಂಡೊಡನೆ ನುಡಿಯದ ಈ ನಾಲಿಗೆ, ಮುಗಿಯದ ಈ ಕೈಗಳು, ಇದ್ದರೇನು ಹೋದರೇನು ........ (ಮಾತು ಮುಗಿಯುವ ಮುನ್ನವೆ)

**ಬಸವಣ್ಣ :** ನಿಮ್ಮಿಂದ ಆಗಿರುವ ತಪ್ಪಾದರೂ ಏನು? ಹರಳಯ್ಯನವರೆ? ಶರಣುಮಾಡಿಸಿಕೊಳ್ಳಲು ನಾನೊಬ್ಬನೇ ಅರ್ಹನೆಂದು ನೀವು ಭಾವಿಸಿದಂತಿದೆ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಮಾತನ್ನು ನೀವು ಮರೆತಿರೇನು? ಅದಿರಲಿ, ........

ನೀವೇಕೆ ಹೀನಕುಲದವರೆಂದು ಇನ್ನೂ ಅಂದುಕೊಳ್ಳುತ್ತೀರಿ ........!? ಲಿಂಗಮುಟ್ಟಿ ನೀವು ಸಂಗನೇ ಆಗಿದ್ದೀರಿ. ಹುಟ್ಟಿನಿಂದ ಯಾರು ಮೇಲಲ್ಲ ಕೀಳಲ್ಲ. ಹೊಲೆಗಂಡಲ್ಲದೆ ಹುಟ್ಟಿಲ್ಲ. ಶಿವಶರಣರಾದ ನಿಮ್ಮ ಕಾಯಕವೇ ಕೈಲಾಸ. ಅಲ್ಲಿ ಶಿವನಿರುವುದು ತಪ್ಪೆ? ನಾನು ಶರಣೆಂದುದು ನೀವೇ ಆದ ಆ ಶಿವನಿಗೆ........ (ಒಂದೆರಡು ಕ್ಷಣ ತಡೆದು........ ಚಕಿತರಾಗಿ) ಹರಳಯ್ಯನವರೆ, ನಿಮ್ಮ ಕಣ್ಣಲ್ಲಿ ನೀರು! ಏಕೆ ಅಳುತ್ತಿದ್ದೀರಿ........?!

**ಹರಳಯ್ಯ :** (ಗದ್ಗದಿಸುತ್ತ) ಇವು ಕಣ್ಣೀರಲ್ಲ ಸಂಗನ ಬಸವಣ್ಣ........ ಮಾತು ಬಾರದವನ ಮಾತುಗಳಿವು ........ ತಪ್ಪು–ಒಪ್ಪುಗಳೊಂದೂ ತಿಳಿಯದವ ನಾನು........ ಈಹರಳನ ಇಹಪರ ಆಗು ಹೋಗು ನಿಮ್ಮದೆ. (ಕೊಂಚ ಸುಧಾರಿಸಿ-ಕೊಂಡು ಉತ್ಸಾಹದಿಂದ) ಹೋಗಲಿ, ಬಸವರಸರೆ, ನಾನೀಗ ನಿಮಗಾಗಿ ಮಾಡಿ ತಂದಿರುವ ಈ ಚಮ್ಮಾವುಗೆಗಳನ್ನಾದರೂ ಸ್ವೀಕರಿಸಿರಿ ........ ಆಗ ನಮಗೆಷ್ಟೊ ನಿರಾಳ ನೆಮ್ಮದಿಯಾಗುತ್ತದೆ.........

**ಬಸವಣ್ಣ :** ಓ....ಹಾಗೊ! ಎಲ್ಲಿ ನೋಡೋಣ, ನೀವು ಮಾಡಿತಂದಿರುವ ಚಮ್ಮಾವುಗೆಗಳನ್ನು! ನಿಮ್ಮ ಅಂಗವಸ್ತ್ರದಿಂದಲೇ ಕಟ್ಟಿ ತಂದಿದ್ದೀರಿ! ಅಂದ ಮೇಲೆ ಅವು ತುಂಬ ವಿಶೇಷವಾಗಿಯೇ ತಯಾರಾದುವೆಂದು ಕಾಣುತ್ತದೆ!

**ಹರಳಯ್ಯ :** (ಕೊಂಚ ಗಡಿಬಿಡಿಯಿಂದ) ಸ್ವಲ್ಪ ತಡೆಯಿರಿ ........ ಬಿಚ್ಚಿ ತೋರಿಸುತ್ತೇನೆ........ ಬಸವರಸರೆ, ನೋಡಿ!

**ಬಸವಣ್ಣ :** (ಪಾದರಕ್ಷೆಗಳನ್ನು ನೋಡಿ ಒಂದು ರೀತಿಯ ಆತಂಕ ಉದ್ವೇಗ ದಿಂದ) ಹರಳಯ್ಯನವರೇ........! ಏನು? ನೀವು ಇವುಗಳನ್ನು ಚಮ್ಮಾವುಗೆಗಳೆಂದಿರಾ ........? ಖಂಡಿತವಾಗಿಯೂ ಅಲ್ಲ! ನನ್ನ ಕಣ್ಣಿನ ದೃಷ್ಟಿಯೇನಾದರೂ............ ಅಹುದು, ಅಹುದು! ಇವು ನಿಮ್ಮ ಸತ್ಯ ಶುದ್ಧ ಕಾಯಕ ನಿರತ ಕೈಗಳಿಂದ ತಯಾರಾಗಿರುವ ಇವು........ ಚಮ್ಮಾವುಗೆಗಳಲ್ಲ........ ಹರಳಯ್ಯನವರೆ. ನನಗೆ ಇವು........ ನವ ವಧೂವರರಿಗೆಂದು ತಯಾರಿಸಿ ಅಲಂಕರಿಸಿರುವ ಜೋಡಿ ಬಾಸಿಗಗಳಂತೆ ಕಾಣುತ್ತಿವೆ ಯಲ್ಲ.........!! ಇವುಗಳದು ಎಂಥ ಆಕಾರ! ಮೇಲಿನ ಪಟ್ಟಿಗೆಗೆ ಬಿಡಿಸಿರುವ ತುರಾಯಿ ಗೊಂಡೆ, ಕುಚ್ಚುಗಳ ಅಪೂರ್ವ ಕುಸುರಿ ಕೆಲಸ........! ನಿಮ್ಮದು ಅಮೋಘ ಕಲೆ ಗಾರಿಕೆ, ಹರಳಯ್ಯನವರೆ. (ಕೊಂಚ ತಡೆದು, ಸಂಶಯ ವ್ಯಕ್ತಪಡಿಸುತ್ತ) ಆದರೆ, ಈ ಮೇಲಿನ ಸುಪ್ಪಾಣಿಯ ಮೆರುಗಿನ ಚರ್ಮ........ ಇದರಲ್ಲೇನೊ ವಿಶೇಷ........ (ಮಾತು ಮುಗಿಯುವ ಮುನ್ನವೆ)

**ಕಲ್ಯಾಣಮ್ಮ :** ಅಣ್ಣನವರೆ, ನೀವು, ನಮ್ಮ ಮೇಲೆ ಒಂದು ಅಧಿಕ ಶರಣನ್ನು ಆದಿನ ಹೊರಿಸಿ ಬಂದಿರಲ್ಲಾ, ಆ ಹೊರೆಯನ್ನು ಹೀಗಾದರೂ ಇಳುಕಲು ಸಾಧ್ಯವೆಂದು ಭಾವಿಸಿ ನಮ್ಮಿಬ್ಬರ ಮೈಯಿಂದ ಕತ್ತರಿಸಿ ತೆಗೆದ........ (ಮಾತುಮುಗಿಯುವಮುನ್ನವೆ)

ಬಸವಣ್ಣ : ಏನು ಮಾಡಿದಿರಿ, ನೀವು? ನಾನು ಶರಣು ಶರಣಾರ್ಥಿ ಎಂ
ಮಾತ್ರಕ್ಕೆ ನೀವು ನಿಮ್ಮ ಮೈದೊಗಲನ್ನು ತೆಗೆದು ಈ ಚಮ್ಮಾವುಗೆಗಳನ್ನು ಮಾ
ಮುಯ್ಯಿ ತೀರಿಸುತ್ತಿದ್ದೀರಲ್ಲ. ಈ ಮುಯ್ಯಿಗೆ ಮತ್ತೊಂದು ಹೋಲಿಕೆಯುಂಟೆ......
ಆದರೆ, ಸಂಗನ ಶರಣರಾದ ನಿಮ್ಮ ಮೈದೊಗಲಿಂದ ಮಾಡಿದ ಈ ಪಾದ ರಕ್ಷೆಗಳನ
ನಾನು ಮೆಟ್ಟಲೆ....?! ಶಿವಶಿವಾ........ ನಾನಂಜುವೆ ಅಳುಕುವೆ. ಇವು ನನ್ನ ಪಾ
ಗಳಿಗಲ್ಲ........ನನ್ನ ಶಿರದ ಮೇಲೆ ಇರಬೇಕಾದುವು........ಇಲ್ಲಿ ಕೊಡಿ........ಇಟ್ಟ
ಕೊಂಡು ಕುಣಿಯುತ್ತೇನೆ. "ಅಯ್ಯಾ........ ನಿಮ್ಮ ಶರಣರ ಚಮ್ಮಾವುಗೆಗೆ ಈಪೃಥ
ಸರಿಬಾರದಯ್ಯಾ........ ಎಂದು (ಬಸವಣ್ಣನವರು ಪಾದರಕ್ಷೆಗಳನ್ನು ತಮ್ಮ ತಲೆಯ
ಮೇಲೆ ಇಟ್ಟುಕೊಳ್ಳುತ್ತಾರೆ. ಇದನ್ನು ಕಂಡ ಹರಳಯ್ಯನವರು)

ಹರಳಯ್ಯ : ಬಸವಣ್ಣಾ........ನಿಮ್ಮ ಪಾದಗಳಿಗೆಂದು ತಂದವುಗಳನ್ನು ತಲೆಯ
ಮೇಲಿಟ್ಟುಕೊಂಡಿರಲ್ಲ ! ಹತ್ತ ಬಂದವರಿಗೆ ಬೆಟ್ಟವೇ ಮೇಲುರುಳಿದಂತಾಯಿತಲ್ಲ
ಪಾಪತೊಳೆದುಕೊಳ್ಳಲು ಬಂದು ಕೂಪದಲ್ಲಿ ಮುಳುಗಿದಂತಾಯಿತ್ತಲ್ಲ........ ನಾ
ಬ್ಬರೂ ಪಾಪ ಕರ್ಮವ ಮಾಡಿದವರು ........ ಮಾತು ಮುಗಿಯುವ ಮುನ್ನವೆ

ಬಸವಣ್ಣಾ : (ಗೆಲುವಿನ ಧ್ವನಿಯಲ್ಲಿ) ನಿಮ್ಮ ಮೇಲೆ ಬೆಟ್ಟವೂ ಉರುಳಿಲ್ಲ
ನೀವು ಪಾಪಿಗಳೂ ಅಲ್ಲ. ನೀವು ಸತಿಪತಿಗಳೀರ್ವರು ಸದ್ಭಕ್ತಿಯ ಸೀಮೋಲಂಘನ
ಮಾಡಿದವರು. ಪರಂಜ್ಯೋತಿ ಸ್ವರೂಪರು. ನಿಮ್ಮಂಥವರು ಮಾಡಿರುವ ಈ
ಚಮ್ಮಾವುಗೆಗಳನ್ನು ಮೆಟ್ಟಲು ಕೂಡಲಸಂಗಮನೊಬ್ಬನೇ ಅರ್ಹ....ಇವುಗಳನ್ನೊಯ
ನಿಮ್ಮ ಮನೆಯಲ್ಲಿಡಿ. ಇವುಗಳನ್ನು ನೋಡಿದವರ ದೃಷ್ಟಿ ಶುದ್ಧವಾಗುತ್ತದೆ. ಮುಟ್ಟಿ
ದವರ ಮೈಲಿಗೆ ಕಳೆದು ಪವಿತ್ರಾತ್ಮರಾಗುತ್ತಾರೆ.........ಶರಣು ಶರಣಾರ್ಥಿ.......
ಹೋಗಿ ಬನ್ನಿ.... ಹರಳಯ್ಯನವರೆ, ಕಲ್ಯಾಣಮ್ಮನವರೆ.

ಹರಳಯ್ಯ ಕಲ್ಯಾಣಮ್ಮ : ಶರಣು ಶರಣಾರ್ಥಿ.... ಸಂಗನ ಬಸವಣ್ಣ.......
ಶರಣು ಶರಣಾರ್ಥಿ.... ಇದೆಲ್ಲಾ ಶರಣರ ಇಚ್ಛೆ ಶಿವನ ಇಚ್ಛೆ...........

## ದೃಶ್ಯ--೨

(ಹರಳಯ್ಯ—ಕಲ್ಯಾಣಮ್ಮ ಬಸವಣ್ಣನವರ ಮಹಾಮನೆಯಿರದ ಹಿಂದಿರುಗು
ತ್ತಿದ್ದಾರೆ. ಅವರಿಗೆ ಬಿಜ್ಜಳನ ಒಬ್ಬ ಉನ್ನತ ಅಧಿಕಾರಿಗಳಾದ ಮಧುವರಸರು ಎದು
ರಾಗುತ್ತಾರೆ. ಮಧುವರಸ ಸನಾತನಿ, ಬಸವಣ್ಣನವರ ತತ್ವಾಚರಣೆಗಳ ವಿರೋಧಿ.
ಎದುರಾದ ಶರಣ ದಂಪತಿಗಳನ್ನು ಕಂಡು ವ್ಯಂಗ್ಯವಾಗಿ ಮಾತನಾಡುತ್ತಾರೆ.)

ಮಧುವರಸ : (ಮಾತಿನಲ್ಲಿ ವ್ಯಂಗ್ಯವನ್ನು ತುಳುಕಿಸುತ್ತ) ಏನು ........! ಶರಣಕುಲಾಗ್ರಣಿಗಳಾದ ಹರಳಯ್ಯ ದಂಪತಿಗಳು ! ಓ, ಬಸವಣ್ಣನ ಮನೆಗೆ ಬೆಳೆದಿತ್ತೇನೋ ತಮ್ಮ ಪಾದ ? ಬಿನ್ನಹ[?]ತೀರಿಸಲಿಕ್ಕಿರಬಹುದು......... ಮಂಗಕ್ಕೆ ಲಿಂಗ ಕಟ್ಟಿದರೆ ಅವನಿಗೆ ಅದೇ ಜಂಗಮ ! ಅದಿರಲಿ........ ಏನದು ಗಂಟು ಬಗಲಲ್ಲಿ ? ಅಂಗವಸ್ತ್ರದಿಂದ ಕಟ್ಟಿ ಅದರ ಮೇಲೆಯೇ ಮನವಿಟ್ಟು ಜೋಪಾನಿಸಿದಂತೆ ಕಾಣುತ್ತಿದೆಯಲ್ಲ ?

ಹರಳಯ್ಯ : [ಹೇಳುವುದೋ ಬೇಡವೊ ಎಂದು ತಡವರಿಸುತ್ತ] ಅವು....ಅವು ಅವುಗಳು........

ಮಧುವರಸ : ಗೊತ್ತಾಯಿತು, ಬಿಡಿ. ನಿಮ್ಮ ಕೈಯಲ್ಲಿ ಇನ್ನೇನು ಇರಲು ಸಾಧ್ಯ.......! ?

ಒಂದೊ ಎರಡೊ ಜೊತೆ ಕೆರಗಳಿರಬೇಕು. ........ (ಮಾತು ಮುಗಿಯುವ ಮುನ್ನವೆ)

ಹರಳಯ್ಯ : (ಧೈರ್ಯದಿಂದ) ಅಹುದು, ಅವು ಕೆರಗಳೆ........ ಅವು....

ಮಧುವರಸ : ಏಕೆ ? ವಾಪಸು ಕೊಂಡೊಯ್ಯುತ್ತಿದ್ದೀರಿ .... ಓ, ನಿಮ್ಮ ಕಾಯಕಕ್ಕೆ ಕೂಲಿ ಗಿಟ್ಟಲಿಲ್ಲವೇನೊ........ ! ಎಲ್ಲಿ ಗಂಟು ಬಿಚ್ಚಿ ನೋಡೋಣ....

ಹರಳಯ್ಯ : (ಸ್ವಾಭಿಮಾನದಿಂದ] ಅವು, ನೀವಂದುಕೊಂಡಂತೆ ಸಾಮಾನ್ಯ ಕೆರಗಳಲ್ಲ ... .... ಅಧಿಕಾರಿಗಳೇ. ಕೂಡಲ ಸಂಗ ಮಾತ್ರ ಮೆಟ್ಟಲು ಯೋಗ್ಯವಾದ ಮತ್ತು ಭಕ್ತಿ ಭಂಡಾರಿ ಸಂಗನ ಬಸವಣ್ಣ ತಮ್ಮ ಶಿರದ ಮೇಲಿಟ್ಟುಕೊಂಡ ಚಮ್ಮಾವುಗೆಗಳು........

ಮಧುವರಸ : [ವ್ಯಂಗ್ಯವಾಗಿ ನಗುತ್ತ] ನೀವು ಆ ಬಸವಣ್ಣನನ್ನು ಅವನು ಆ ಕೂಡಲ ಸಂಗಮನನ್ನು ಹೊಗಳದೇ ಮತ್ತಿನ್ನಾರು ಹೊಗಳುವವರು ಇದ್ದಾರೆ....! ಅದಿರಲಿ. ಗಂಟು ಬಿಚ್ಚಿ ಕೆರಗಳನ್ನು ತೋರಿಸಿರಿ.... ಮೆಚ್ಚುಗೆಯಾದರೆ ಹೊನ್ನು ಕೊಟ್ಟು ಕೊಳ್ಳುತ್ತೇವೆ.

ಹರಳಯ್ಯ : ಬಿಚ್ಚಿತೋರಿಸಲು ನಮ್ಮದೇನೂ ಅಡ್ಡಿಯಿಲ್ಲ......... ಆದರೆ....

ಮಧುವರಸ : [ಕೋಪದಿಂದ] ಎಷ್ಟು ಮಾತನಾಡುವುದು, ಹರಳಯ್ಯ.... ನಾವು ಅವುಗಳನ್ನು ಕೊಂಡು ಮೆಟ್ಟಿಯೇ ಮೆಟ್ಟುತ್ತೇವೆ..... ಕೆರ ಹೊಲಿದು ಕೂಲಿ ನೋಡಿಕೊಳ್ಳುವುದಷ್ಟೇ ನಿಮ್ಮದು........

ಕಲ್ಯಾಣಮ್ಮ : ಅಧಿಕಾರಿಗಳೇ....- ನೀವಂದುಕೊಂಡಂತೆ ಇವು ಸಾಮಾನ್ಯ ಕೆರಗಳಲ್ಲ........ನೀವು ಮೆಟ್ಟಬಾರದು........ ಇವು, ನವ.... (ಮಾತು ಮುಗಿಯುವ ಮುನ್ನವೆ)

ಪಾದರಕ್ಷೆಗಳನ್ನು ಮೆಟ್ಟಿ ಬಿಡುವ ಶಬ್ದ)

ಮಧುವರಸ: (ಅಸಹಾಯಕತೆ ಮತ್ತು ದುಃಖದಿಂದ) ಅಯ್ಯೋ.... ಅಯ್ಯೋ .... ವೈಯುರಿ.... ತಾಳಲಾರೆ........ ಅಪ್ಪಾ ನಾನು ಸತ್ತೆ........ ಏನು ಮಾಡಲಿ ಈಗ ! ? ಆಯ್ಯೋ, ಅಯ್ಯೋ, ಈ ಕೆರಗಳನ್ನು ಮೆಟ್ಟಿ ಮರಣಕ್ಕೆ ತುತ್ತಾದೆ.... ಆಯ್ಯೋ........

## ದೃಶ್ಯ—೪

ಹರಳಯ್ಯನ ಕುಟೀರ, ಅವರು ತಮ್ಮ ಕಾಯಕದಲ್ಲಿ ನಿರತರಾಗಿರುವಾಗ ಇದ್ದಕ್ಕಿದ್ದಂತೆ ಮಧುವರಸರ ಆಗಮನ)

ಮಧುವರಸ : (ದೈನ್ಯತೆಯಿಂದ) ಶಿವಶರಣ ಹರಳಯ್ಯ ದಂಪತಿಗಳಿಗೆ ಶರಣು ಶರಣಾರ್ಥಿ........ ಶರಣು ಶರಣಾರ್ಥಿ........

ಹರಳಯ್ಯ, ಕಲ್ಯಾಣಮ್ಮ : ಏನು ? ಮಧುವರಸರು........ ನಮ್ಮ ಮನೆಯ ಮುಂದೆ........

ಹರಳಯ್ಯ : ಶರಣು ಶರಣಾರ್ಥಿ........ ಬನ್ನಿ, ಅಧಿಕಾರಿಗಳೆ........ ಮತ್ತೆ, ನಮ್ಮಿಂದೇನಾದರೂ....

ಮಧುವರಸ : ಅಹುದು.... ಈಗ ನಿಮ್ಮಿಂದಲೇ ನನ್ನ ಉದ್ಧಾರವಾಗಬೇಕು. ನಿಮ್ಮನ್ನು ಬಿಟ್ಟು ನಾನಿಲ್ಲ........ನನ್ನ ಮದ ಮಾತ್ಸರ್ಯ ಅಜ್ಞಾನಕ್ಕೆ ತಕ್ಕುದನ್ನು ಅನುಭವಿಸಿದ ಮೇಲೆ ಈಗ ನಿಮ್ಮಿಂದಲೇ ನನ್ನ ಜ್ಞಾನ ಚಕ್ಷು ತೆರೆಯಿತು. ನನ್ನ ಘೋರ ಪಾಪ ಕೃತ್ಯಕ್ಕೆ ನಿಮ್ಮ........(ಮಾತು ಮುಗಿಯುವ ಮುನ್ನವೆ)

ಹರಳಯ್ಯ : (ಸಮಾಧಾನದಿಂದ) ಮಧುವರಸರೆ........ ನಿಮ್ಮ ಮಾತುಗಳೊಂದೂ ನನಗೆ ಅರ್ಥವಾಗುತ್ತಿಲ್ಲ. ನಿಮ್ಮ ದು:ಖಕ್ಕೆ ಮತ್ತೆ ನಾವೇನಾದರೂ....

ಮಧುವರಸ : ಅಯ್ಯೋ, ಹಾಗನ್ನಬೇಡಿ ಹರಳಯ್ಯನವರೆ.... ಈಗಾಗಲೆ ಶಿವ ಶರಣರನ್ನು ನೋಯಿಸಿ ನೊಂದು ಬೆಂದುದಾಯಿತು....

ಹರಳಯ್ಯ : ನಿಮ್ಮ ಮಾತುಗಳೊಂದೂ ನನಗೆ ಅರ್ಥವಾಗುತ್ತಿಲ್ಲ.... ನೀವು ಬಿಡಿಸಿ ಹೇಳಿದರಷ್ಟೇ ನನಗೆ....

ಮಧುವರಸ : ಅಹುದು, ಹರಳಯ್ಯನವರೆ. ನಾನೀಗ ಅದನ್ನೇ ಮಾಡ ಬಂದಿದ್ದೇನೆ. ಶರಣ ದಂಪತಿಗಳ ಮರೆಹೋಗಲು ಬಂದಿದ್ದೇನೆ. (ಕೊಂಚ ತಡೆದು) ಅಂದು ಅಹಂಕಾರ ದಿಂದ ನೀವಿತ್ತ ಎಚ್ಚರಿಕೆಯನ್ನು ಕಡೆಗಣಿಸಿ ಆ ದಿವ್ಯ ಚಮ್ಮಾವುಗೆಳನ್ನು ಮೆಟ್ಟಿದ ಪರಿಣಾಮವಾಗಿ ನಾನು ಅನುಭವಿಸಿದ್ದು.... ಒಂದಲ್ಲ ಎರಡಲ್ಲ ! ನೋಡಿ, ನನ್ನ ಚರ್ಮ ಸುಟ್ಟು ಕುಷ್ಟ ಹಿಡಿದು ಕೆಟ್ಟು ಕೊಳೆತು ನಾರತೊಡಗಿತು. ಗುಣಪಡಿಸಿ ಕೊಳ್ಳಲೆಂದು ನಾನು ತಿಂದ ಮದ್ದು ಕುಡಿದ ಕಷಾಯಕ್ಕೆ ಕೊನೆಯಿಲ್ಲ. ಆದರೆ ಅದ ರಿಂದೇನೂ ಪ್ರಯೋಜನವಾಗದೆ ನನ್ನ ಜೀವನವಿಷ್ಟೇ........ ಬೇಗ ಸತ್ತರೆ ನಿಶ್ಚಿಂತೆ ಎಂದು ಕೊಂಡಿದ್ದಾಗ ಮತ್ತೆ ನಿಮ್ಮಿಂದಲೇ ನನ್ನ ಪುನರ್ ಜನ್ಮವಾಯಿತು, ನ್ನೆ ರಾತ್ರಿಯಷ್ಟೇ ನಮ್ಮ ಮನೆಯ ಸೇವಕಿ ನನಗೆ ಸ್ನಾನಕ್ಕೆ ನೀರು ತರಲು ಹೋಗಿ ಮೈಮರೆತು ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಮಾಡಿದ ದಿವ್ಯ ಅಪರಾಧದಿಂದ ನಾನು ಬದುಕಿದೆ. ಅಂದರೆ, ನನಗೆ ಸ್ನಾನಕ್ಕೆ ನೀರು ತರುವುದು ತಡವಾಯಿತೆಂದು ತಿಳಿದ ಆಕೆ ಸಮೀಪವೇ ಇದ್ದ ನಿಮ್ಮ ಬಚ್ಚಲ ಗುಂಡಿ—ಅಲ್ಲ—ಹರಳಯ್ಯನ ತೀರ್ಥದಿಂದ ನೀರನ್ನು ಮೊಗೆದು ತಂದು ನನ್ನ ಸ್ನಾನಕ್ಕೆ ಅಣಿ ಮಾಡಿದಳು. ಆ ಜಲದಲ್ಲಿ ಮೀಯಲಾಗಿ ಈ ತೊಗಲಿಗೆ ತಗುಲಿದ್ದ ಭೀಕರ ರೋಗನಾಯವಾಗಿ ಈಗ ನನಗೆ ಮರು ಹುಟ್ಟು ಬಂದಿದೆ........ನಾನೀಗ ಹಿಂದಿನ ಮಧುವರಸನಲ್ಲ. ಮಾಡಿದ ತಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ಬೆಂದುನೊಂದು ಬದಲಾಗಿದ್ದೇನೆ. ನಿಮ್ಮ ವನೇ ನಿಮ್ಮವನೇ ಆಗ ಬಂದಿದ್ದೇನೆ........ಬಸವರಸರಿಗೆ ಹೇಳಿ ಈ ಶಿವಶರಣವಾಹಿ ನಿಯಲ್ಲಿ ನನ್ನನ್ನು ಕಣವಾಗಿಸಿಕೊಳ್ಳಿ........ ಆದರೆ ಅದಕ್ಕೂ ಮುಂಚೆ ನನ್ನ ತಪ್ಪಿಗೆ ಪ್ರಾಯಶ್ಚಿತ್ತವಾಗಿ ನೀವು ಕೇಳಿದುದನ್ನು ನೀಡುವೆ. ಧನ ಕನಕ, ವಸ್ತ್ರ—ಕೊನೆಗೆ ನನ್ನ ಅಧಿಕಾರ ಬೇಕಾದರೆ ಅದನ್ನು ಬಿಟ್ಟು ಕೊಡುವೆ ...... ಕೇಳಿ, ಹರಳಯ್ಯನ ವರೇ........ ಕೇಳಿ.

ಹರಳಯ್ಯ : ನಿಮ್ಮಿಂದ ಅಂತಹ ಪ್ರಮಾದವೇನೂ ಆಗಿಲ್ಲ, ಮಧುವರಸರೇ. ಆದರೆ, ನಿಮ್ಮ ಒಂದು ಬೇಡಿಕೆಯಾದ ಶರಣಮಾರ್ಗವನ್ನು ಹಿಡಿಯುವ ಬಯಕೆ ಯನ್ನು ಬೇಕಾದರೆ ಈ ಕೂಡಲೆ ಬಸವರಸರಿಗೆ ತಿಳಿಸುವ ಕೈಂಕರ್ಯವನ್ನು ಮಾಡು ತ್ತೇನೆ. ನಿಮ್ಮ ಮನಃಪರಿವರ್ತನೆಯಾದುದೇ ದೊಡ್ಡ ಕೊಡುಗೆಯಲ್ಲವೆ........ ನೀನೇನು ಹೇಳುತ್ತೀಯ, ಕಲ್ಯಾಣಿ ?

ಕಲ್ಯಾಣಮ್ಮ : ನೀವು ಹೇಳುತ್ತಿರುವುದು ಸರಿಯೇ ಇದೆ, ನಿಜಪದವನ್ನರಿತ

ಸತ್ಯಶರಣರಿಗೆ ಹೆಚ್ಚಿನ ಬಯಕೆಗಳೇನಿವೆ, ಅಧಿಕಾರಿಗಳೇ ? ಕಾಯಕ ತತ್ಪ ನಿಷ್ಠರಾದವರು ಅಂದಂದೇ ದುಡಿದು ಅಂದಂದಿನ ದಂದುಗವನ್ನು ತೀರಿಸಿಕೊಂಡು ಉಳಿದುದನ್ನು ಜಂಗಮದಾಸೋಹಕ್ಕೆ ನೀಡುತ್ತಾರೆ. ಅವರಿಗೆ ಹೆಚ್ಚಿನ ಧನಕನಕ ವಸ್ತ್ರಾದಿಗಳ ಅಗತ್ಯವೆಂಬುದು ಇಲ್ಲವೇ ಇಲ್ಲ........

ಮಧುವರಸ : ಹಾಗಾದರೆ, ನಿಮ್ಮೀರ್ವರನ್ನು ಮೆಚ್ಚಿಸುವ ಪರಿಯಂತು ! ನನಗೆ ಹೊಸ ಬಾಳನ್ನು ಕೊಟ್ಟ ನಿಮಗೆ ನಾನು ಸಲ್ಲುವ ಬಗೆಯಾವುದು......... (ಕೊಂಚ ತಡೆದು ಯೋಚಿಸುತ್ತಾ) ಅಹುದು, ಈಗ ನನಗೆ ಹೊಳೆಯಿತು.....! ಅದೇ ಸರಿ... ! ಹರಳಯ್ಯ ದಂಪತಿಗಳೆ, ಬೆಲೆ ಕಟ್ಟಬಹುದಾದ ಯಾವುದಕ್ಕೇ ಆಗಲಿ ಅದಕ್ಕೆ ಆದರ ಬೆಲೆಯ ಮಿತಿ ಇದ್ದೇ ಇರುತ್ತದೆ. ನೀವು ನನಗೆ ಕೊಟ್ಟ ಈ ದಿವ್ಯ ದರ್ಶನ ಬೆಲೆ ಕಟ್ಟಲಾಗದಂಥದು. ನೀವು ಹೂ ಅನ್ನುವುದಾದರೆ ನಾನೂ ಸಹ ಬೆಲೆ ಕಟ್ಟಲಾಗದಂಥ ಜೀವಂತ ರತ್ನವೊಂದನ್ನು ನಿಮ್ಮ ಮಡಲಿಗೆ ಹಾಕುತ್ತೇನೆ. ಹರಳಯ್ಯನವರೆ, ಕೃಪೆ ಮಾಡಿ ಹೂ ಅನ್ನಿ.........

**ಹರಳಯ್ಯ :** ಈ ದಿನ ನಿಮ್ಮ ಮಾತುಗಳೊಂದೂ ನನಗೆ ಅರ್ಥವಾಗುತ್ತಿಲ್ಲ. ಅಧಿಕಾರಿಗಳೆ ನಿಮ್ಮ ಈ ಒತ್ತಾಯದ ಪರಿಣಾಮವಾಗಿ ನಾನು ಉಭಯ ಸಂಕಟಕ್ಕೆ ಸಿಕ್ಕಿಕೊಂಡಂತಾಗಿದೆ....ನಾನು ಹೂ ಅನ್ನದಿದ್ದರೆ ನೀವು ಬಿಡುವವರಲ್ಲ. ಆಯಿತು, ಅದೇನು ಹೇಳಿ....

ಮಧುವರಸ : ಈಗ ನೀವು ಮಾತು ಕೊಟ್ಟದ್ದೀರಿ....ಹಿಂದೆ ಸರಿವಂತಿಲ್ಲ, ಹರಳಯ್ಯನವರೆ ! (ಕೊಂಚ ತಡೆದು) ನನಗೆ, ನನಗೆ ಜೀವರತ್ನವೇ ಆಗಿರುವ ನನ್ನ ಮಗಳು ನೀಲಳನ್ನು ನಿನ್ನ ಮಗ ಶೀಲವಂತನಿಗೆ....(ಮಾತು ಮುಗಿಯುವ ಮುನ್ನವೆ)

ಕಲ್ಯಾಣಮ್ಮ ಹರಳಯ್ಯ : ನೀವೇನು ಹೇಳುತ್ತಿದ್ದೀರಿ.... ಮಧುವರಸರೆ ! ? ಇದಾಗದು....ನಾವು ಹುಟ್ಟನಿಂದ ಹೀನ ಕುಲದವರು.... ನೀವಾದರೂ ವಿಪ್ರರು........ ನಿಮಗೂ ನಮಗೂ....

ಮಧುವರಸ : ನಿಮ್ಮನ್ನು ಹೀನ ಕುಲದವರೆಂದು ಹೇಳುವರಾರು, ಹರಳಯ್ಯ ನವರೆ ? ನಾನು ಹಾಗೆಂದೇ ತಿಳಿದು ಉದ್ಧಟತನದಿಂದ ವರ್ತಿಸಿದ್ದಕ್ಕೆ ನನಗೆ ಏನಾ ಯಿತೆಂಬುದು ಈಗ ಸೂರ್ಯ ಪ್ರಕಾಶದಷ್ಟು ಸ್ಪಷ್ಟ........ ನೀವು ಲಿಂಗನಿಷ್ಠಾ ಮಾನಸರು, ಗುರುಲಿಂಗ ಸೇವಾತತ್ಪರರು, ಚರಲಿಂಗ ನಿತ್ಯಾರಾಧಕರು, ತ್ರಿವಿಧ ದಾಸೋಹಿಗಳು........ ನಿಮ್ಮನ್ನು ಹೀನಕುಲದವರೆಂದರೆ ! ಹಾಗನ್ನುವವರು ಜನ್ಮ ಜನ್ಮದಲ್ಲೂ ಭವಕ್ಕೆ ಸಿಲುಕಿ ತೊಳಲುತ್ತಾರೆ. ಬೇಕಾದರೆ, ಬಸವಣ್ಣನವರಲ್ಲಿಗೇ ಹೋಗಿ ಈ ವಿಷಯವನ್ನು ಒಪ್ಪಿಸೋಣ, ಅವರು ಸಮ್ಮತಿಸಿದರೆ ಆಗಬಹುದಲ್ಲ....

ಹರಳಯ್ಯ : ಏನೊ.... ಆಗಬಹುದು ... ಬಸವಾದಿ ಶರಣರು ಒಪ್ಪುವುದಾದರೆ ನಮ್ಮದೇನೂ ವಿರೋಧವಿಲ್ಲ.... ನೀನೇನು ಹೇಳುತ್ತೀಯ ಕಲ್ಯಾಣಿ ?

ಕಲ್ಯಾಣಮ್ಮ : ಆಗಬಹುದು.... ಶರಣರ ಇಚ್ಛೆ, ಶಿವನ ಇಚ್ಛೆ.

## ದೃಶ್ಯ-೫

[ಹಿನ್ನೆಲೆಯಲ್ಲಿ ಪರಾಕು ಕೇಳಿಬರುತ್ತಿರುವಂತೆ ಬಿಜ್ಜಳ ಮಹಾರಾಜನ ಆಗಮನವಾಗುತ್ತದೆ:-

ಭುಜ ಬಲ ತಿಲಕ, ಪೃಥ್ವೀವಲ್ಲಭ, ತ್ರಿಭುವನ ಮಲ್ಲ, ಅರಿರಾಯರ ಗಂಡ ಚಾಲುಕ್ಯ ಚಕ್ರಾಧೀಶ್ವರ ಶ್ರೀ ಶ್ರೀ ಶ್ರೀ ಬಿಜ್ಜಳ ಭೂಪಾಲ ಬಹುಪರಾಕ್............
-ಹಿಂದೆಯೇ ಒಬ್ಬರಿಗೊಬ್ಬರು ಶರಣು ಶರಣಾರ್ಥಿ ಎನ್ನುವುದು ಕೇಳಿಬರುತ್ತದೆ.]

ಬಿಜ್ಜಳ : ಮಹಾಮಾತ್ಯ ಬಸವರಸರು, ಕ್ಷೇಮವೆ ?

ಬಸವಣ್ಣ : ಕ್ಷೇಮವೆಲ್ಲಿ ಬಂತು, ದೊರೆಗಳೆ. ಈ ಲೋಕದ ಹಂಗು ತೊರೆದಂದು ಮಾತ್ರವೆ ಕ್ಷೇಮ ನೆಮ್ಮದಿಗಳು ದೊರೆಯುವುವೊ ಏನೋ!?

ಬಿಜ್ಜಳ : ಏಕೆ....!? ಅಣ್ಣನವರು ಇಂದು ನಿರೀಕ್ಷೆಗಿಂತ ಖಿನ್ನಮನಸ್ಕರಾಗಿರುವಂತಿದೆ? ನಾವು, ಕಾರಣವನ್ನು ತಿಳಿಯಬಹುದೆ ?

ಬಸವಣ್ಣ : ಪ್ರಭುಗಳ ಅರಿವಿಗೆ ಬಾರದಂತೆ, ಕಲ್ಯಾಣದಲ್ಲಿ ಏನಾದರೂ ಘಟಿಸಲು ಸಾಧ್ಯವೆ....? ಆದರೂ, ತಾವು ವಿಶೇಷ ಆಸಕ್ತಿಯಿಂದ ಕೇಳುತ್ತಿರುವುದರಿಂದ ಹೇಳುತ್ತೇನೆ.... ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಶಿವನ ಮಹಾಮಣಿಹವನ್ನು ಕಾರ್ಯರೂಪಕ್ಕಿಳಿಸುವ ಶರಣರ ಪ್ರಯತ್ನಗಳಿಗೆ ಈಗೀಗ ವಿಘ್ನಗಳು ಅಧಿಕವಾಗುತ್ತಲಿವೆ ಎಂದರೆ ತಾವು ಅನ್ಯಥಾ ಭಾವಿಸಬಾರದು. ಸಂಪ್ರದಾಯವಾದಿಗಳ ಸಂಕೋಲೆಗಳ ಕ್ರೂರ ಹಿಡಿತಕ್ಕೆ ಸಿಕ್ಕಿರುವ ಕೆಳವರ್ಗದ ಜನರಿಗೆ ಬಿಡುಗಡೆ ಎಂಬುದು ಬಯಲ ಮರೀಚಿಕೆಯಾಗಿದೆ....(ಮಾತು ಮುಗಿಯುವ ಮುನ್ನವೆ)

ಬಿಜ್ಜಳ : ಬಸವರಸರೇ....ವಿಷಯವೇನೆಂದು ನೇರವಾಗಿ ತಿಳಿಸಿರಿ.... ನಮ್ಮ ನಿಮ್ಮ ನಡುವೆ ಸುತ್ತು ಬಳಸಿನ ಮಾತೇಕೆ ? ಸಂಗನ ಹೆಸರಿನಲ್ಲಿ, ನೀವು ಮತ್ತು ಅಸಂಖ್ಯಾತ ಶರಣರು ಎಸಗುತ್ತಿರುವ ನಿಮ್ಮ ತ್ರಿವಿಧ ದಾಸೋಹ ಇತ್ಯಾದಿಗಳಿಗೆ ನಾವು ಎಂದಾದರೂ ಅಡ್ಡ ಬಂದುದುಂಟೆ....?

ಬಸವಣ್ಣ : ಹಾಗೇನಿಲ್ಲ, ದೊರೆಗಳೆ. ಆದರೆ, ಇಂದು ನಾವು ಯಾವ ಸರ್ವ ಸಮಾನತೆಯ ವೃಕ್ಷವನ್ನು ನೆಟ್ಟು ಬೆಳೆಸಿಕೊಂಡು ಬಂದೆವೊ ಅದು ತನ್ನ ಅತ್ಯಪೂರ್ವ ಫಲವನ್ನು ನೀಡುವ ಸಮಯದಲ್ಲಿ, ಅದನ್ನು ಕಡಿದು ಉರುಳಿಸಲು ಕೊಡಲಿ ಹಿಡಿದ ಕೈಗಳು ಸನ್ನಾಹ ನಡೆಸಿವೆ....ಅಷ್ಟೆ.

ಬಿಜ್ಜಳ : ಬಸವರಾಜರು, ಮತ್ತೆ, ಒಗಟಿನ ಮಾತುಗಳನ್ನೇ ಆಡುತ್ತಿದ್ದಾರೆ....

ಬಸವಣ್ಣ : ಇಲ್ಲ, ದೊರೆಗಳೆ. ವಿಷಯ ಅಷ್ಟು ಗಂಭೀರದ್ದಿರುವುದರಿಂದ ಈ ನಾಲ್ಕು ಮಾತುಗಳು ಅಗತ್ಯವೇನೋ ಅನ್ನಿಸಿದುವು....(ಕೊಂಚ ತಡೆದು) ನಮ್ಮ ರಾಜ್ಯದ ಅಧಿಕಾರಿಗಳಾದ ಮಧುವರಸರು, ಶರಣ ದಂಪತಿಗಳಾದ ಹರಳಯ್ಯ ಮತ್ತು ಕಲ್ಯಾಣಮ್ಮನವರಿಂದ ಪ್ರಭಾವಿತರಾಗಿ ಇಷ್ಟಲಿಂಗ ಧಾರಣೆ ಮಾಡಿಕೊಂಡು ಶರಣ ಮಾರ್ಗಿಗಳಾದುದು ತಮಗಾಗಲೆ ತಿಳಿದ ವಿಷಯವೆ....ಈಗ ಅವರು, ತಮ್ಮ ಮಗಳನ್ನು ಹರಳಯ್ಯ ಕಲ್ಯಾಣಮ್ಮನವರ ಪುತ್ರ ಶೀಲವಂತನಿಗೆ ಕೊಟ್ಟು ಮದುವೆ ಮಾಡಲು ಮುಂದೆ ಬಂದಿದ್ದಾರೆ....ಇದಕ್ಕೆ ಸಂಪ್ರದಾಯಸ್ಥರ ವಿರೋಧವೇನೇ ಇದ್ದರೂ ತಾವು ಒಪ್ಪಿಗೆ ನೀಡುತ್ತಿರೆಂದು ನಾನು ಭಾವಿಸುತ್ತೇನೆ....(ಕ್ಷಣ ಕಾಲ ಮೌನ....)

ಬಿಜ್ಜಳ : ಬಸವರಸರೆ, ಈ ಕಾರ್ಯವೇನೊ, ನಿಜಕ್ಕೂ ಅಮೋಘವಾದುದೆ....ತಾತ್ವಿಕವಾಗಿ, ಇದಕ್ಕೆ ನಮ್ಮ ಸಂಪೂರ್ಣ ಒಪ್ಪಿಗೆಯುಂಟು. ಬಿಜ್ಜಳ ಭೂಪಾಲನ ಸಾಮ್ರಾಜ್ಯದಲ್ಲಿ ಇಂಥದೊಂದು ವಿವಾಹ ನಡೆಯಿತೆಂದರೆ ಅದು ಈ ನಾಡಿನ ಇತಿಹಾಸದಲ್ಲಿ ಮೊಟ್ಟಮೊದಲಿನದಾಗುವುದಿಲ್ಲವೆ ? ಹಿಂದೆ ಕನಸಿನಲ್ಲಿಯೂ ಕಾಣಲು ಹೆದರಬೇಕಿದ್ದ ಇಂಥದೊಂದು ವಿವಾಹ ಚಾರಿತ್ರಿಕ ವಿಕ್ರಮವಾಗುತ್ತದೆಂಬುದನ್ನು ನಾವು ಬಲ್ಲೆವು.... ಆದರಿಂದ, ನೀವೂ ಸೇರಿದಂತೆ ಅಸಂಖ್ಯ ಶಿವಶಿರಣರಿಗೆ ಸಲ್ಲುವ ಆಚಂದ್ರಾರ್ಕ ಕೀರ್ತಿಗೆ ನಾವೂ ಪಾಲುದಾರರಿರುತ್ತೇವೆಂಬುದರ ಅರಿವೂ ನಮಗಿದೆ. ಅನುಭವ ಮಂಟಪದ ನಿಮ್ಮ ಕ್ರಿಯಾಶೀಲ ಆಧ್ಯಾತ್ಮಿಕ ಚಟುವಟಿಕೆಗಳಿಗೆ ನಮ್ಮ ಸಹಾನುಭೂತಿ ಪ್ರೋತ್ಸಾಹಗಳು ಯಾವಾಗಲೂ ಇರುವವೆ ಎಂಬುದೂ ನಮಗೆ ಗೊತ್ತು....ಆದರೆ, ಈಗ....

ಬಸವಣ್ಣ : ಹೇಳಿ, ದೊರೆಗಳೆ....ತಮ್ಮ ಅಭಿಪ್ರಾಯಕ್ಕೆ ಶರಣರು ಯಾವಾಗಲೂ ಹೆಚ್ಚಿನ ಮಹತ್ವವನ್ನು ಕೊಡುತ್ತಲೇ ಬಂದಿದ್ದಾರೆ....

ಬಿಜ್ಜಳ : ಅಂದರೆ....ಈಗ, ಇಂತಹ ಪ್ರತಿಲೋಮ ವಿವಾಹಕ್ಕೆ ಮಹಾಜನತೆ ಸಿದ್ಧವಿಲ್ಲವೇನೊ....!? ಅದಕ್ಕಿನ್ನು ಕಾಲ ಪಕ್ವವಾಗ ಬೇಕೆಂಬುದೇ ನಮ್ಮ ಸದ್ಯದ ಅಭಿಪ್ರಾಯ....ನಿನ್ನೆಯಷ್ಟೇ ಈ ವಿಷಯವನ್ನು ಪರೋಕ್ಷವಾಗಿ ನಮ್ಮ ಕಿವಿಗೆ ಮುಟ್ಟಿಸುವ ಪ್ರಯತ್ನ ನಡೆಯಿತು.... ಸನಾತನಿಶಾಸ್ತ್ರಿ, ಕರ್ಮಠಶೆಟ್ಟಿ, ಪಟ್ಟಭದ್ರ ಪುರೋಹಿತ,

ವಿಲೋಚನಶರ್ಮ, ಯಜ್ಞಧರಮೂರ್ತಿ, ಮುಂತಾದವರು ಒಬ್ಬ ವಿಪ್ರನ ಮಗಳು ಶ್ವಪಚನ ಮಗನನ್ನು ವರಿಸುವುದೆಂದರೆ ಧರ್ಮಗ್ಲಾನಿಗೆ ಇದಕ್ಕಿಂತ ಸ್ಪಷ್ಟ ಉದಾಹರಣೆ ಯುಂಟೆ ಎಂದು ಇದನ್ನು ವಿರೋಧಿಸಲು ಚಳುವಳಿಯನ್ನೇ ಮಾಡಲಿದ್ದಾರಂತೆ. ಧರ್ಮ ರಕ್ಷಣೆಯ ಭಾರ ಹೊತ್ತಿರುವ ನಮಗೆ ಇಂದೊ ನಾಳೆಯೊ ಅವರು ಬಂದು ಮನವಿ ಸಲ್ಲಿಸುತ್ತಾರಂತೆ.... ನಾವೇನಾದರೂ ನಿಮಗೆ ಬೆಂಬಲ ನೀಡುವುದಾದರೆ ಈ ಕಲ್ಯಾಣನಗರಿ ಧರ್ಮದ ಬೆಂಬಲ ಕಳೆದುಕೊಂಡು ಅನಾಥವಾಗುವುದಂತೆ. ಸಾಮ್ರಾಜ್ಯದ ತಳಹದಿ ಅದುರಲಿದೆಯಂತೆ....

(ಹಿನ್ನೆಲೆಯಲ್ಲಿ: ಕ್ರಾಂತಿ,....ಕ್ರಾಂತಿ....ಕಲ್ಯಾಣದಲ್ಲಿ ಕ್ರಾಂತಿಯ ಕಾರ್ಮುಗಿಲು.... ಬಿಜ್ಜಳ ಭೂಪಾಲ, ಎಚ್ಚರ, ಎಚ್ಚರ, ಇತ್ಯಾದಿ ಘೋಷಣೆಗಳು ಕೇಳಿ ಬರುತ್ತವೆ)
ಬಿಜ್ಜಳ..................ಆದ್ದರಿಂದ, ಬಸವರಸರೆ, ಈ ವಿಷಯವಾಗಿ ಪುನರಾಲೋಚಿಸು ವುದು ನಮಗೆ ಸಮ್ಮತ.

ಬಸವಣ್ಣ : ಸಾಮ್ರಾಜ್ಯದ ರಕ್ಷಣೆಯನ್ನು ಹೊತ್ತಿರುವ ಪ್ರಭುಗಳ ಆಲೋಚನೆ ಯನ್ನು ನಾನು ಮನಸಾರೆ ಒಪ್ಪುತ್ತೇನೆ.... ಆದರೆ, ಇದು, ಪ್ರತಿಲೋಮ ವಿವಾಹ-ವಾಗುವುದೆಂಬುದನ್ನು ನಾನು ಒಪ್ಪಲಾರೆ. ಏಕೆಂದರೆ, ಹರಳಯ್ಯ ಮಧುವರಸ ರಿಬ್ಬರೂ ಲಿಂಗಾಂಗಿಗಳು.... ಹುಟ್ಟಿನಿಂದ ವಿಪ್ರನಿರಲಿ ಅಂತ್ಯಜನಿರಲಿ ಅದಕ್ಕೆ ಶರಣ ಧರ್ಮದಲ್ಲಿ ಸೂಜಿಮೊನೆಯಷ್ಟು ಪ್ರಾಮುಖ್ಯತೆಯಿಲ್ಲ. ಶಿವಭಕ್ತರಾದವರೆಲ್ಲ ಕುಲಜ ರೆಂದು ಹೇಳುತ್ತದೆ ಈ ಧರ್ಮ. ಇಷ್ಟರ ಮೇಲೆ ತನಗೆ ಬೇಕಾದ ಧರ್ಮದಲ್ಲಿ ನಂಬಿಕೆ, ವಿಶ್ವಾಸ, ಆಚರಣೆ, ಪೂಜೆ ಕೊಡುಕೊಳ್ಳುವುದು ಇತ್ಯಾದಿಗಳು ವ್ಯಕ್ತಿಯ ವೈಯಕ್ತಿಕ ವಿಷಯಗಳು. ಅದಕ್ಕೆ ರಾಜಧರ್ಮ ಕೈಹಾಕ ಬಾರದೆಂದು ನನ್ನ ಅನಿಸಿಕೆ.... ಪ್ರಭು ಗಳಿಗೆ ಸೂಕ್ತವೆನ್ನಿಸುವುದಾದರೆ ಹರಳಯ್ಯ ಮಧುವರಸರನ್ನೇ ಇಲ್ಲಿಗೆ ಕರೆಸಿ ಕೇಳ-ಬಹುದು.... ಅವರ ಮನದ ಇಂಗಿತ ಮತ್ತು ಆಶೋತ್ತರಗಳನ್ನು ತಾವೇ ಸ್ವತಃ ಕೇಳುವುದಾದರೆ....

ಬಿಜ್ಜಳ : ಅಹುದು, ಬಸವರಸರೆ.... ಹಾಗೆ ಮಾಡುವುದೇ ಸರಿ.... (ಮತ್ತೊಮ್ಮೆ, ಕ್ರಾಂತಿ ಇತ್ಯಾದಿ ಮಾತುಗಳು ಕೇಳಿಬಂದು ಹಾಗೆಯೇ ಅಡಗುತ್ತವೆ) ಯಾರಲ್ಲಿ.... ಒಂದೆರಡು ಕ್ಷಣಗಳ ನಂತರ) ಮಧುವರಸರೇ.... ನೀವೇನು ಹೇಳುತ್ತೀರಿ.... ?
ಮಧುವರಸ : ನಾನು ಉತ್ತಮನೆಂಬ ಮುನ್ನಿನ ಭ್ರಾಂತಿ ಈಗ ಅಳಿದು ಅರ್ಕೇಶ್ವರ ಲಿಂಗವೇ ತಾನಾದ ಬಳಿಕ ಕುಲವಿರುವುದಾದರೆ ಹೆಣ್ಣು ಗಂಡೆಂಬ ಎರಡಲ್ಲದೆ ಹಲವಿಲ್ಲ, ಹಗಲು ರಾತ್ರಿ ಎಂಬ ಎರಡಲ್ಲದೆ ಸಪ್ತದಿನವಿಲ್ಲ, ಅರಿವು ಮರೆವೆ ಎರಡಲ್ಲದೆ ಬೇರೊಂದು ತೊಡಿಗೆಯಿಲ್ಲ–ಅರ್ಕೇಶ್ವರಲಿಂಗ ಏಕರೂಪವಲ್ಲದೆ ಬಹು ನಾಮದವನಲ್ಲ.... ಅರಿದು ಅರಿದು ನಾನಿಂದು ಕುಲಕಂಜುವನಲ್ಲ....

(ಹಿನ್ನೆಲೆಯಲ್ಲಿ–"ಕ್ರಾಂತಿ, ಕ್ರಾಂತಿ–ವರ್ಣಾಶ್ರಮ ಧರ್ಮ ಮಣ್ಣು ಪಾಲಗುತ್ತಿದೆ–ವರ್ಣಸಂಕರಗೈದವರಿಗೆ ಕಣ್ಣು ಕೀಳಿಸಬೇಕು ಎಳೆಹೂಟೆಕಟ್ಟಿ ಎಳೆಸಬೇಕು........ ಕ್ರಾಂತಿ, ಕ್ರಾಂತಿ" ಮಾತುಗಳು ಕೇಳಿ ಬರುತ್ತವೆ)

ಬಿಜ್ಜಳ : ನೀವೇನು ಹೇಳುತ್ತೀರಿ, ಹರಳಯ್ಯನವರೆ.... ?

ಹರಳಯ್ಯ : ಈ ಹರಳ ಹೇಳುವುದೇನಿದೆ, ಪ್ರಭೂ.... ಶಿವಶರಣರು ಹುಟ್ಟಿ ಬಂದುದೇ ಈ ನಾಡಿನ ಭಾಗ್ಯ. ಶ್ವಪಚರನ್ನು ಶಿವಪದವಿಗೇರಿಸುವ ಅವರ ಮಹಾಮಣಿಹಕ್ಕೆ ನಾನು, ನನ್ನ ಮಡದಿ, ನನ್ನ ಮಗ ಶೀಲವಂತ ವಸ್ತುವಾದುದೇ ನಮ್ಮ ಪುರಾಕೃತ ಪುಣ್ಯವೆಂದು ನನ್ನ ಭಾವನೆ.... ಸಂಪ್ರದಾಯ ಶರಣರಿಗೆ ಇದೊಂದು ಸಹಿಸಲಾಗದ ಬೆಳವಣಿಗೆ. ಇದೆಲ್ಲದರ ಪರಿಣಾಮವೇನಾಗಬಹುದೆಂಬುದರ ಅರಿವು ನನಗಿದೆ.... ಪ್ರವಾಹಕ್ಕೆ ಇದಿರಾಗಿ ಹೊರಟ ಪತಿತರ ದೋಣಿ ನಮ್ಮದು ! ಅದರ ಹುಟ್ಟು ಶಿವ ಶರಣರ ಕೈಲಿದೆ ! ಹುಟ್ಟು ಮುರಿಯ ಬಹುದು ! ದೋಣಿ ಮುಳುಗಬಹುದು ! ಆದರೆ, ಇಂತಹದೊಂದು ಘಟನೆ ಈ ಮಣ್ಣಿನ ಮೇಲೆ ಬಸವಾದಿ ಶಿವಶರಣರ ನೇತೃತ್ವದಲ್ಲಿ ಜರುಗಿ ಮುಂದಿನ ಪೀಳಿಗೆಗೆ ಮಾದರಿಯಾಗುವುದಾದರೆ ಇಂತಹ ಘಟನೆಗಳು ಯುಗ-ಯುಗದಲ್ಲೂ ಘಟಿಸಲಿ. ಶಿವನು ಇಚ್ಛಿಸುವುದಾದರೆ ಅಂತಹ ಘಟನೆಗಳು ಜರುಗಿ-ದಾಗಲೆಲ್ಲ ನಾನು, ನನ್ನ ಮಡದಿ, ಮಗ ಮತ್ತು ಮಧುವರಸರು ಅವರ ಪುತ್ರಿ ನೀಲ-ರಾದಿಯಾಗಿ ಶಿವಶರಣರೆಲ್ಲರೂ ಹುಟ್ಟಿ ಬರುತ್ತೇವೆ.... ಹಾಗೆ ಬಂದು, ಶಿವನು ಮೆಚ್ಚದ ಈ ವರ್ಣ ವ್ಯವಸ್ಥೆಯನ್ನು ವಿರೋಧಿಸಿ ಬಲಿದಾನಗೈದು ಹುತಾತ್ಮರಾಗುತ್ತೇವೆ.... ಇದಕ್ಕೆ ಸಂಗನ ಬಸವಣ್ಣನೇ ಸಾಕ್ಷಿ....

(ಹಿನ್ನೆಲೆಯಲ್ಲಿ–ಕ್ರಾಂತಿ, ರಕ್ತಕ್ರಾಂತಿ, ಕಲ್ಯಾಣದಲ್ಲಿ ಕ್ರಾಂತಿ ಇತ್ಯಾದಿ ಮಾತುಗಳು ಕೇಳ ಬಂದು ನಂತರ ನಿಧಾನವಾಗಿ ಅಡಗುತ್ತವೆ–ನಂತರ ಸುಶ್ರಾವ್ಯವಾಗಿ ಈ ಹಂತಿ ಪದ ಮೂಡಿ ಬರುತ್ತದೆ)

ಹರನ ಶಿಖರದ ಮೇಲೆ ಸಿರಿಗಂಧ ಮರ ಹುಟ್ಟಿ ।
ಕಿರೀಟದೊಳು ಎರಡು ಗಿಣಿಕೂತು ಹಾಡಿದವು ।
ಹರಳಯ್ಯನೆಂಬ ಹಳೆಕಥೆಯ॥





# ವಚನ ದೀಪ್ತಿ -೨

ವಿದ್ವಾನ್, ಎಸ್. ಷಡಕ್ಷರಿ, ಉಪಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು, ಶ್ರೀ ಕ್ಷೇತ್ರ.

(ಆಧಾರ ಬಸವಣ್ಣನವರ ವಚನಗಳು)

## ಹರಕೆಯ ಕುರಿ

ಜನರಿಗೆ ಹಬ್ಬ ಹರಿದಿನಗಳೆಂದರೆ ಸಂಭ್ರಮವೋ ಸಂಭ್ರಮ. ಕೆಲವರಲ್ಲಿ ದೇವ ದೇವಿಯರ ಹೆಸರಿನಲ್ಲಿ ವಿವಿಧ ಪ್ರಾಣಿಗಳನ್ನು ಬಲಿ ಕೊಟ್ಟು ಜಿಹ್ವಾ ಚಾಪಲ್ಯವನ್ನು ತೀರಿಸಿಕೊಳ್ಳುವ ಹಬ್ಬಯಕೆ ಈ ಹಿನ್ನೆಲೆಯಲ್ಲಿ ಮಾನವನ ಭವಿಷ್ಯದಲ್ಲಿ ಮೃತ್ಯು ದೇವತೆಯ ಮನೆಯ ಹೆಬ್ಬಯಕೆ ಬಲಿಯಾಗಲಿರುವ ಪವಿತ್ರ ಸನ್ನಿವೇಶವನ್ನು 12 ನೇ ಶತಮಾನದಲ್ಲಿಯೇ ಮನಗಂಡ ಶರಣರು ತನ್ನ ವಚನದಲ್ಲಿ ಹೀಗೆ ನುಡಿದರು.

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು
ಕೊಂದರೆಂಬುದ ನರಿಯದೆ
ಬೆಂದೊಡಲ ಹೊರೆವುತ್ತಲಿದೆ
ಅಂದಂದೆ ಹುಟ್ಟಿತ್ತು, ಅಂದಂದೆ ಹೊಂದಿತ್ತು
ಕೊಂದವರುಳಿವರೆ ಕೂಡಲ ಸಂಗಮದೇವ ||

ಈ ಜೀವನ ನಶ್ವರವಾದದ್ದು ಎಂಬದನ್ನು ಅರಿಯದೆ ಜನ ತಮ್ಮ ಶಾರೀರಿಕ ಸುಖ-ಭೋಗಕ್ಕಾಗಿ "ಜೀವೋ ಜೀವಸ್ಯ ಜೀವಿತಂ" ಎಂಬುದರ ಅರ್ಥವನ್ನು ವಿಕೃತ ಗೊಳಿಸಿ ಕೊಂಡು, 'ಒಂದು ಜೀವಕ್ಕೆ ಮತ್ತೊಂದು ಜೀವ ಅವಶ್ಯ' ವೆಂದು ಭಾವಿಸಿ ಕೊಂಡು ಪ್ರಾಣಿ ಸಮುದಾಯವನ್ನು ಬಲಿ ತೆಗೆದುಕೊಳ್ಳುತ್ತಾ ಸಂಕುಚಿತ ಜೀವನ ವ್ಯಾಪಾರವನ್ನು ಮುಂದುವರಿಸುತ್ತಲೇ ಬಂದಿರವನು.

ಅಗೋಚರ ಶಕ್ತಿಯ ಹೆಸರಿನಲ್ಲಿ ಆಚರಿಸುವ ಹಬ್ಬಕ್ಕಾಗಿ ಹರಕೆ ಹೊತ್ತು ತಂದ ಕುರಿಯು ಇನ್ನು ಕೆಲವೇ ಕ್ಷಣಗಳಲ್ಲಿ ತನ್ನನ್ನು ಕೊಲ್ಲೂವರೆಂಬುದನ್ನು ತಿಳಿಯದೆ ತನ್ನ ಹಸಿವಿನ ವೇಳೆಯಲ್ಲಿ ಮಂಟಪ ಚಪ್ಪರಗಳಿಗೆ ಅಲಂಕಾರಿಸಿದ ಹಸಿರು ತೋರಣದ ತಳಿರನ್ನು ಜಗ್ಗಿ ತಿನ್ನುತ್ತಿರುವುದು. ಅದೇ ಸಮಯದಲ್ಲಿ ಅದರ ಕೊರಳನ್ನು ಕೊಯ್ಯಲು ಆಯುಧವನ್ನು ಕಲ್ಲಿಗೆ ತೀಡಿ ಹರಿತಗೊಳಿಸುತ್ತಿರುವರು. ಆ ಆಯುಧವು ಇನ್ನೊಂದು ಘಳಿಗೆಯಲ್ಲಿ ಕುರಿಯ ಕೊರಳ ಮೇಲೆ ನಿಂತ ಕೆನ್ನೆತ್ತರನ್ನು ಚಿಮ್ಮಿಸುವುದಿದೆ. ಇಷ್ಟಾದರೂ ಕುರಿಯು ಆ ಸಾವಿನ ದವಡೆಯಿಂದ ಪಾರಾಗುವ ಯೋಚನೆಯಲ್ಲಿಲ್ಲ. ತಳಿರನ್ನು ಮೇಯುವತ್ತ ಕುತೋಹಲಿಯಾಗಿ ಮಗ್ನವಾಗಿದೆ. ಇದು ಆತ್ಮೋದ್ಧಾರ ಮುಕ್ತಿ, ಮೋಕ್ಷಾದಿಗಳ ಪರಿಜ್ಞಾನವಿಲ್ಲದ ಅಜ್ಞಾತ ಪಶು, ಆದರೆ ಪ್ರಾಣಿಗಳಲ್ಲಿ ಶ್ರೇಷ್ಠವೆನಿಸಿದ ಮಾನವ ಆ ಕುರಿಗಿಂತ ಉತ್ತಮನೆನಿಸಲಾಗುವುದಿಲ್ಲಿ. ತನ್ನ ಜೀವನದ ಚಾಪಲ್ಯಗತ್ತ

ಮನಸೋತು ಆತ್ಮೋದ್ಧಾರದ ಚಿಂತನೆಯನ್ನೇ ಮರೆತು ಬಿಡುವನು. ಮೃತ್ಯುದೇವತೆ ಅವನನ್ನು ಯಾವಾಗಬೇಕಾದದರೂ ಕಬಳಿಸಲು ಸಕಲಸಿದ್ಧತೆ ಮಾಡಿಕೊಳ್ಳುತ್ತಿರುವುದು

ಅಂದಮೇಲೆ ಮಾನವನ್ನು ಇಹ ಲೋಕದ ಸುಖ ಉಲ್ಲಾಸಗಳಿಗೆ ಜೋತು ಬಿದ್ದು 'ಆಧ್ಯಾತ್ಮಭಾಗ್ಯ'ದಿಂದ ವರಚಿತನಾಗುತ್ತಿದ್ದಾನೆ. ಜೊತೆಗೆ ತಾನೇ ಸಾವಿನ ಹಬ್ಬಕ್ಕೆ "ಹರಕೆಯ ಕುರಿ" ಯಾಗಿರುವಾಗ ತನ್ನ ಹಬ್ಬಕ್ಕೆಂದು ಅಜ್ಞಾತ ಪಶು ಪಕ್ಷಿಗಳನ್ನು ಬಲಿಕೊಡುತ್ತಿರುವುದು ನಿಜಕ್ಕೂ ಆಶ್ಚರ್ಯವೆಂಬುದೇ ಈ ವಚನ ದೀಪ್ತಿಯ ಮುಖ್ಯ ಸಾರ.



## ಕಲ್ಯಾಣದ ಹಣತೆ



ನೀಲಾಂಬಿಕೆ ಎಂ.ಎ, 242, ಉತ್ತರಾದಿ ಮಠದ ರಸ್ತೆ, ಕಿಲ್ಲೇಮೊಹಲ್ಲಾ, ಮೈಸೂರು-4

ಶತ ಶತ ಮಾನಗಳಿಂದಲೂ ಅಪರಾಧದ
ಸರಮಾಲೆ ಹೊತ್ತು. "ಕ್ಷಮ ಯಾ ಧರಿತ್ರಿ" ಯಾಗಿ
ನಿಂತ ನನ್ನ ಸ್ಥಿತಿ ನೀನೊಬ್ಬ ನರಿತಿದ್ದೆ.
ಹೆಣ್ಣಾಗಿ ಹುಟ್ಟಿದುದಕ್ಕೆ ಮರುಗಿ, ನೊಂದು, ಬೆಂದು
ಕತ್ತಲ ರಾಜ್ಯದಲಿ ಕಾಲ ಕಳೆಯುತಿದ್ದ ನಮ್ಮ
ಆ ಕೂಪದಿಂ ಮೇಲೆತ್ತಿದ್ದೆ. ನಮ್ಮೆಲ್ಲರ
ತಾಯಿಯೆಂದೆ. ಸೋದರಿಯೆಂದೆ. ಮಹಾದೇವಿಯಂತೆ
ಕಂಡೆ. ನೊಂದ ನಮ್ಮ ಕಂಗಳಲಿ ನಗೆ ಹೂ ಅರಳಿಸಿದೆ
ನಮ್ಮೆಲ್ಲರ ಅನುಬಾವಿಗಳಾಗಿಸಿದೆ. ಅಸಂಗ್ರಹವಕಲಿಸಿದೆ.
ನಿನ್ನಿಂದ ಹೊಸಲೋಕ ಕಂಡೆವಿಂದು.
ಶಾಂತಿ, ನೆಮ್ಮದಿ ಪಲ್ಲವಿಸಿ ಪೂತು ಸೌಸವವನ್ನು
ದಶದಿಕ್ಕಿಗೆ ಹರಡಿತ್ತಂದು. ಇಂದು ?
ಶಾಂತಿ. ಶಾಂತಿ ಸಾಗರದ ಪಾಲು. "ಉಳ್ಳವರು ಶಿವ"
ಆಗಿಹರಿಂದು. ಪರಿಪರಿಯ ಬೇಗೆಯಲಿ
ದ್ವೇಷದುರಿಯಲಿ, ಕಳ್ಳತನ, ದರೋಡೆ, ಮೋಸ
ವಂಚನೆಯ ಸುಳಿಯಲಿ ಸಿಲುಕಿದೆವು.
ಅದನಳಿಸಿ ಶಾಂತಿ ತರೆ ಮತ್ತೊಮ್ಮೆ ಉದಿಸುನೀ
ಆಡು ತಾಂಡವ ನಾಟ್ಯ. ಹಣೆಗಣ್ಣ ತೆರೆ
ಎಲ್ಲ ಭಸ್ಮವ ಮಾಡು. ಹೊಸ ಲೋಕ ಸೃಷ್ಟಿಸು
ಮತ್ತೆ ಬೆಳಗಲಿ ಅಲ್ಲಿ ಬಸವರಾಜ್ಯದ ಪ್ರಣತೆ
ಕಲ್ಯಾಣದ ಹಣತೆ.

# ಗಾಂಧೀಜಿಯನ್ನು ಕಣ್ಣಾರೆ ನೋಡಿದ್ದು

— ಎಂ. ರಂಗರಾವ್, ನಂ. 10, ವಿ.ಬಿ.ಸಿ. 4ನೇ ಕ್ರಾಸ್, ಪಂಡಾರ ಸ್ಟ್ರೀಟ್, ವಾಡೆಪಳನಿ, ಮದರಾಸ್–60026.

ಕೇವಲ ಅಡಿಗೇ ಭಟ್ಟ ಹುಡುಗ ಮಾಧವನು ಯಾವುದೇ ರಾಜಕೀಯ ಪಕ್ಷಕ್ಕೂ ಸೇರಿದವನಲ್ಲ. ಮಹಾತ್ಮಾಗಾಂಧಿಯ ಮೇಲೆ ಪ್ರತ್ಯೇಕಗುರಿಅವನಿಗಿತ್ತು. ಹಾಗೆ ಗಾಂಧಿಯ ಮೇಲೆ ಗುರಿಯಾದವರು ಲಕ್ಷೋಪಲಕ್ಷಜನರಿದ್ದರು. ಅಂಥವರಲ್ಲಿ ಮಾಧವನೊಬ್ಬ ಅಷ್ಟೇ. ಅವನ ಶಾಲಾ ವಿದ್ಯೆ ಓದು ಬರಹವಷ್ಟಕ್ಕೇಪರಿಮಿತ. ಗಾಂಧೀ ಸಮಾಚಾರ ಬಂದ ಪತ್ರಿಕೆಯನ್ನು ಆಸಕ್ತಿಯಿಂದ ಓದುವನೂ ಗಾಂಧೀಜಿಯ ವಿಮರ್ಶೆಗಳನ್ನು ಕಿವಿ ನಿಗುರಿಸಿ ಕೇಳುವನು.

ಅಂತಹ ಮಾಧವನು ಮೊದಲು ಬಳ್ಳಾರಿಯಲ್ಲಿ ಅಡಿಗೇ ಭಟ್ಟನಾಗಿದ್ದನು. ಕಲಿಯದೆ ಬರುವ ವಿದ್ಯೆ ಅಡಿಗೆ ತಾನೇ? ಆ ಕಾಲದಲ್ಲಿ ಧನಿಕರು ಯಾವುದೇ ತಮ್ಮ ಮಕ್ಕಳಿಗೆ ಕಲಿಸುವರಲ್ಲದೆ ತೀರ ಬಡವರ ಮಕ್ಕಳನ್ನು ಪರಚಾರಕರಿಗೇ ಕಳುಹಿಸುತ್ತಿದ್ದರು. ಹಾಗೆ ತಿಳಿದವರೊಬ್ಬರ ಮೂಲಕ ಬಳ್ಳಾರಿಗೆ ಕಳುಹಿಸಲ್ಪಟ್ಟಿದ್ದವನು ಮಾಧವ.

ಗಾಂಧೀಭಕ್ತನಾದ ಮಾಧವನು ಅಲ್ಲಿಯೇ ಮೊತ್ತಮೊದಲು ಅವರನ್ನು ನೋಡಿದ್ದು.

## ಲಾಠಿ ಚಾರ್ಜ್ ಅನುಭವ

ಮಾಧವನು ಹುಟ್ಟೂರಾದ ಮಂಗಳೂರಿನ ಸಮೀಪದ ಹೊಸ ಬೆಟ್ಟುಗ್ರಾಮದಿಂದ ಮಂಗಳೂರಿನ ಕಂತನಾಡಿಯಲ್ಲಿದ್ದ ಶ್ರೀಮಂತರ ಮನೆಯಲ್ಲಿ ಅಡಿಗೆಗೆ ಸೇರಿದ್ದನು. ಅಲ್ಲಿ ಮನೆಗೆ ಬೇಕಾದ ಹಾಲು ಮತ್ತು ತರಕಾರಿಗಳನ್ನು ಹಂಪನಕಟ್ಟೆಯಿಂದ ತರಬೇಕಾಗಿತ್ತು. ಆಗ ಗಾಂಧೀಜಿ ಉಪ್ಪುಸತ್ಯಾಗ್ರಹಕ್ಕೆ ಕೈಗೊಂಡು ದಂಡೀಯಾತ್ರೆಗೆ ಹೊರಟಿದ್ದರು. ಆಗ ಅವರ ಪ್ರತಿಧ್ವನಿ ಭಾರತ ದೇಶವಿಡೀ ಕೇಳುತ್ತಿದ್ದಿತ್ತು. ಹಾಗೆ ಸತ್ಯಾಗ್ರಹದ ಘೋಷಣೆ ಗರ್ಜಿಸುತ್ತ ಗಾಂಧೀ ಭಕ್ತರೂ ಬೀದಿಯಲ್ಲಿ ಹೋಗುತ್ತಿರಲು, ಪೋಲೀಸರು ಅವರಿಗೆ ಲಾಠೀ ಚಾರ್ಜು ನಡೆದರೂ ಆಗ ಬದಿಯಲ್ಲಿ ನಿಂತಿದ್ದ ಸಾಮಾನ್ಯ ಜನರ ಸಾಲಿನಲ್ಲಿ ಮಾಧವನೂ ಇದ್ದನು. ಲಾಠ ಲಠನೆ ಬೀಳುವ ಲಾಠೀ ಚಾರ್ಜಿನ ಏಟು ಮಾಧವನ ಕಾಲ ಗಂಟೆಗೂ ಬಿತ್ತು. ಅದರಿಂದ ಸಾರ್ವಜನಿಕರ ಆವೇಶವು ಹೆಚ್ಚಾದ್ದರಿಂದ ಗೋಲೀಬಾರ್ ಕೂಡಾ ಆಗಿ ಕೆಲವು ಸಾವುಗಳೂ ಆದುವು. ಆ ಕಾಲದ ಪತ್ರಿಕೆಗಳಲ್ಲಿ ಇಂತಹ ಸುದ್ದಿ ಅನೇಕ.

ಮಾಧವನು ಕುಂಟುತ್ತಾ ಮನೆಗೆ ಬಂದು ನಡೆದ ಸಂಗತಿಯನ್ನು ಯಜಮಾನ ರೊಂದಿಗೆ ಹೇಳಿ, ಆದಿನ ಹತ್ತಿರದ ಹೋವಲ್ಟಿನ ಹಾಲು, ತರಕಾರಿಗಳಿಂದ ಸುಧಾರಿಸಿ ಕೊಳ್ಳಲಾಯಿತು. ಆಗ ಮಂಗಳೂರಿನಲ್ಲಿ ಮಾಧವನಿಗೆ ತಿಂಗಳಿಗೆ ಐದು ರೂಪಾಯಿ ಸಂಬಳ. ಹೆಚ್ಚು ಸಂಬಳಕ್ಕಾಗಿ ಬಳ್ಳಾರಿಗೆ ಕರೆದೊಯ್ಯಲ್ಪಟ್ಟಿದ್ದನು. ಗಾಂಧೀಜೀಯ ಗುಣವಿಶೇಷ. ಅಲ್ಲಿ ಸಂಜೆ ಬಿಡುವಿನ ವೇಳೆಯಲ್ಲಿ ಗಾಂಧೀಜೀ ಹರಿಜನ್ ನಿಧಿ ಸಂಗ್ರಹಕ್ಕೆ ಬರುವುದು ಗೊತ್ತಿತ್ತು. ಮಾಧವನು ಅವರನ್ನು ಕಣ್ಣಾರೆ ನೋಡಲು ಹೋದನು. ಹೆಂಗಸರು ಗಂಡಸರು ಸೇರಿದ ಗುಂಪೇ ಗುಂಪು.

ಗಾಂಧೀಜೀ ಎತ್ತರದ ವೇದಿಕೆಯಲ್ಲಿ ಕುಳಿತು ಇದಿರಿನಲ್ಲಿರುವವರಿಗಷ್ಟೇ ಕೇಳುವ ಹಾಗೆ ಭಾಷಣ ಮಾಡುತ್ತಿದ್ದರು. ಗಂಟಲೆತ್ತಿ ಕೂಗಿ ಶ್ರಮಪಡುತ್ತಿದ್ದಿಲ್ಲ. ಅವರ ಹತ್ತಿರ ಇನ್ನೊಬ್ಬರು ನಿಂತು ಧ್ವನಿವರ್ಧಕವನ್ನು ಬಾಯಿಯ ಹತ್ತಿರ ಹಿಡಿದು ಕನ್ನಡದಲ್ಲಿ ಭಾಷಾಂತರಿಸಿ ಹೇಳುತ್ತಿದ್ದರು.

ಅವರ ತೀರ ಸಮೀಪ ಹೋಗಿ ನಿಂತಿದ್ದಾನೆ ಮಾಧವ. ಶ್ರೀಮಂತರಾದ ಸ್ತ್ರೀ ಪುರುಷರು ತಮ್ಮಲ್ಲಿದ್ದ ಆಭರಣಗಳನ್ನು ಕಳಚಿ ಕಳಚಿ ಗಾಂಧೀಜಿಯವರ ಮುಂದೆ ರಾಶಿ ರಾಶಿಯಾಗಿ ಹರಡುತ್ತಿದ್ದರು. ಅಂತಹ ಆವೇಶದಲ್ಲಿ ಚಿಕ್ಕ ಚಿಕ್ಕಹುಡುಗರು ಕೂಡಾ ತಮ್ಮ ತಮ್ಮ ಆಭರಣ ಅಲಂಕಾರಗಳನ್ನು ಗಾಂಧೀಜೀ ಮುಂದೆ ಹಾಕಿದ ಕೂಡಲೇ ಗಾಂಧೀಜಿಯವರು ಆ ಬಾಲ ಬಾಲೆಯರು ಹಾಕಿದ್ದನ್ನು ಪ್ರತ್ಯೇಕಮಾಡಿ ನಿಮ್ಮ ಹಿರಿಯರ ಅನುಮತಿಯಿಂದ ಹಾಕುವಿರಾ? ಅಲ್ಲಿ, ನಿಮ್ಮಷ್ಟಕ್ಕೆ ಹಾಕುವಿರಾ? ಎಂದು ಕೇಳಿದರು.

ಅವರಷ್ಟಕ್ಕೆ ಹಾಕಿದ್ದನ್ನು ಗಾಂಧೀಜೀ ತೆಗೆದುಕೊತ್ತಿರಲಿಲ್ಲ ಕೂಡಲೇ ಆ ಬಾಲಕರ ಹಿರಿಯರು ಬಂದು ತಾವೇ ಹಾಕಿಸಿದ್ದೆನ್ನುವುದೂಉಂಟು. ವಾಪಾಸ್ಸು ಮಾಡು ವುದುಂಟು. ತೀರಾ ಬಡವರದೆಂದು ತಿಳಿದವರ ಸೊತ್ತನ್ನು ಮುಟ್ಟುವುದಿಲ್ಲ ಗಾಂಧೀಜೀ (ಆ ಕಾಲದಲ್ಲಿ ಬಡವರೂ ಬಂಗಾರದ ಆಭರಣ ಮಾಡಿಸಿ ಹಾಕ್ಕೊಳುವುದು ಸರ್ವ ಸಹಜ. ಅವನಿಗೆ 15 ರೂಪಾಯಿ ಬೆಲೆಯಕಾಲ.)

## ಆಗಮನ ವೈಭವ

ಅನಂತರ ಮೂರು ವರ್ಷಗಳಲ್ಲಿ ಮಾಧವನ ಯಜಮಾನರು ಹವಾಬದಲಾವಣೆ ಗಾಗಿ ನಂದಿಹಿಲ್ಸ್‌ಗೆ ಹೋಗಬೇಕಾಯಿತು. ಅದೇ ಕಾಲದಲ್ಲಿ ಗಾಂಧೀಜಿ ಕೂಡಹವಾದ ಬದಲಾವಣೆಗಾಗಿ ನಂದೀಹಿಲ್ಸ್‌ಗೆ ಬರಲಿರುವರೆಂದು ಪತ್ರಿಕೆಯಲ್ಲಿ ಸುದ್ದಿ ಬಂದಿತ್ತು.

ಮಾಧವನ ಯಜಮಾನರು ಅಲ್ಲಿ ತಂಗಿರಲು ಬೆಂಗಳೂರಿನಲ್ಲಿದ್ದ ಅವರ ಬಂಧುಗಳ ಮೂಲಕ ಮನೆಯನ್ನು ಮೊದಲೇ ಏರ್ಪಾಡು ಮಾಡಿ ಹೆಂಡತಿಯೊಂದಿಗೆ ಹೊರಟಿದ್ದರು. ಅಷ್ಟಗೆ ಮಾಧವನು ಬೇಕಷ್ಟೆ ?

ಅಲ್ಲಿ ಗಾಂಧೀಜಿ ಬರುವದಿನ ಎಳ್ಳು ಹಾಕಲು ಎಡೆಯಿಲ್ಲದಷ್ಟು ಜನ ! ಗಾಂಧೀ ದರ್ಶನಕ್ಕಾಗಿ ಅಕ್ಕಪಕ್ಕದ ಊರುಗಳಿಂದಲೂ ಜನರು ಬಂದಿದ್ದರು. ಗುಡ್ಡದ ಮೇಲೂ ಕೆಳಗೂ ಜನರೋ ಜನ ! ಮಾಧವನು ನಂದಿಬೆಟ್ಟದ ಗೋಡೆಯ ಬದಿಯಲ್ಲಿ ನಿಂತು ನೋಡುತ್ತಿದ್ದನು.

ಅಲಂಕೃತವಾದ ಪಲ್ಲಕ್ಕಿಯೊಂದು ಬೆಟ್ಟದ ಮೇಲೆ ಬರುವುದು ಕಂಡಿತು. ಅದರಲ್ಲಿ ಗಾಂಧೀ ಮಹಾತ್ಮರಿದ್ದಾರೆಂದು ಜನರಿಗೆಲ್ಲಾ ಅದರ ಮೇಲೆಯೇ ಕಣ್ಣು.

ಗಾಂಧೀಜಿ ರಂಟಿಕಾ ಊರಿಕೊಂಡು ಬೆಟ್ಟದ ಮೇಲೇರಿ ಬರುವುದು ಮತ್ತೆ ಕಂಡಿತು. " ಮಹಾತ್ಮ ಗಾಂಧಿಕೀ ಜೈ " ಘೋಷಣೆ. ಹಾಗೆಬಂದ ಗಾಂಧೀಜಿ ಕೆರೆಯಬದಿಯಲ್ಲಿ ಇರಿಸಲಾದ ಆಸನದಲ್ಲಿ ಕುಳಿತರು. ಆಯಾಸದ ಛಾಯವಿಲ್ಲದ ಬೊಕ್ಕೇಛಾಯಿಯ ನಗು ಮೊಗದ ಗಾಂಧೀಜಿ! ಮಾಲೆಗಳ ಬಿದ್ದದ್ದೇ ಬಿದ್ದದ್ದು! ಹಾರಿ ಹಾರಿ ಬಂದದ್ದೇ ಬಂದದ್ದು

## ಭೇದಭಾವವಿಲ್ಲದ ಮಾನವನ ಸಮತಾ ದೃಷ್ಟಿ

ಹವಾಬದಲಾವಣೆ ಎಂದರೆ ಬೆಟ್ಟದ ಸುತ್ತಲು ನಡೆಯುತ್ತಾ ಇರುವುದು. ಅದೇ ವೈದ್ಯ ಚಿಕಿತ್ಸೆ. ಆ ಮಳೆಗಾಲದ ಋತುವಿನಲ್ಲಿ ಬಿಸಿಲಿನ ಬೇಗೆ ಇರುವುದಿಲ್ಲ. ಹಾಗೆ ಗಾಂಧೀಜಿ ನಡೆಯುವ ದೃಶ್ಯ ಕಿಟಕಿಯಿಂದ ನೋಡಿದರೆ ಮಾಧವನಿಗೆ ಕಾಣುತ್ತಿತ್ತು.

ಅದೊಂದು ದಿನ-ಬಹುಶಃ ಸೋಮವಾರ ವಿದ್ದೀತು ಗಾಂಧೀಜಿಯ ಮೌನವ್ರತದ ದಿನ ಅವರು ವಾಕಿಂಗ್ ಹೊರಟಿದ್ದರು. ಆಗ ಕುರಿಗಳನ್ನು ಮೇಯಿಸುವ ಹನ್ನೆರಡು ವಯಸ್ಸಿನ ಹುಡುಗನೊಬ್ಬ ಮನೆಯ ಅಂಗಳದ ಮೇಲ್ಪರಿಯಲ್ಲಿ ಗಾಂಧೀಜಿಯನ್ನು ನೋಡಲು ತಿರುಗಿದಾಗ ಬದಿಯಲ್ಲಿ ಕಾಲುಜಾರಿ ತೂಕತಪ್ಪಿ ಅಂಗಳಕ್ಕೆ ಬಿದ್ದ. ಅದನ್ನು ನೋಡಿದ ಕೂಡಲೇ ಗಾಂಧೀಜಿ ಮಾಧವನಿರುವ ಮನೆಗೇ ಬಂದರು. ಗಾಂಧೀ ಕಡೆಯವರು ಆಹುಡುಗನನ್ನು ಎತ್ತಿದರು. ಹುಡುಗನ ತೊಡೆ ಕಾಲ್ಗಂಟುಗಳಿಂದ ರಕ್ತಸುರಿಯುತ್ತಿದ್ದರೂ "ಇಲ್ಲಾ ಬೇಡ ನಂಗೇನಿಲ್ಲಾ" ಎನ್ನುತ್ತಿದ್ದರು. ಗಾಂಧೀಯ ಕಡೆಯವರು ಅವರ ವಸ್ತ್ರವನ್ನೇ ಹರಿದು ರಕ್ತವನ್ನೊರಸಿ, ಕಟ್ಟು ಕಟ್ಟಿದರು. ಅಷ್ಟರೊಳಗೆ ಮಾಧವನು ಮನೆಯುಲ್ಲಿದ್ದ ಮೂರು ಆಸನಗಳನ್ನು ಹೊರಗಿಟ್ಟನು " ಬೇಡ ಒಳಗಿಟ್ಟು ಬಾಗಿಲು ಹಾಕ್ಕೋ" ಎಂಬಂತೆ ಸನ್ನೆ ಮಾಡಿದರು ಗಾಂಧೀಜಿ !

ಆ ಹುಡುಗ ಗಾಂಧೀಜೀ ಕಾಲಿಗೆ ಸಾಷ್ಟಾಂಗವಾಗಿ ಬಿದ್ದಿದ್ದ. ಗಾಂಧಿ ಮತ್ತು ಅವರ ಕಡೆಯವರು ಹುಡುಗನನ್ನಪ್ಪಿಸಿ ಆಶೀರ್ವಾದ ಮುದ್ರೆ ತೋರಿಸಿ ನಗುತ್ತಾ ತಮ್ಮ ದಾರಿ ಹಿಡಿದು ಹೊದರು. ಗಾಂಧಿಜೀಯ ಮಾನವಸಮತಾ ದೃಷ್ಟಿ ಹೀಗಿತ್ತು !

## ಪ್ರಾರ್ಥನೆಯ ವಿಧಾನ

ದಿನಾ ರಾತ್ರಿಯಾದ ಕೂಡಲೇ ಗಾಂಧೀಜೀ ಪ್ರಾರ್ಥನೆಗೆ ಕುಳಿತುಕೊಳ್ಳುವರೆಂದು ಆಗ ಯಾರು ಬೇಕಾದರೂ ಹೋಗಬಹುದೆಂದು ಮಾಧವನಿಗೆ ಗೊತ್ತಾಯಿತು. ಅವನು ಯಜಮಾನರ ಅಜ್ಞೆಪಡೆದು ಗಾಂಧೀಜಿಯ ಪ್ರಾರ್ಥನೆಯನ್ನು ನೋಡಲು ಹೋದನು.

ಆಗ ಗಾಂಧೀಜೀ ವಾಕಿಂಗ್ ಮುಗಿಸಿ ಹಿಂದಿರುಗಿ ಬರುವ ಹೊತ್ತು. ದೊಡ್ಡ ದೊಡ್ಡ ಹೆಜ್ಜೆ ಇಡುತ್ತಾ ಬರುತ್ತಿದ್ದರು. ಮಾಧವನು ಓಕ್ಲೇಂಡ್ ಭವನದ ಮುಂದೆ ಅವರ ಬರುವಿಕೆ ನೋಡುತ್ತಾ ನಿಂತನು. ಅವರು ಹತ್ತಿರ ಬಂದ ಕೂಡಲೇ ತಲೆಯೆತ್ತಿ ಅವರ ಮುಖ ನೋಡಿ ನಮಸ್ಕಾರ ಮಾಡಿದನು.

ಅವರು ಬೊಕ್ಕೇಬಾಯಿ ನಗುವಿನಿಂದ ಅವನನ್ನು ನೋಡುತ್ತಾ ಒಂದು ಪ್ರಶ್ನೆ ಮಾಡಿದರು. ಅದು ಅರ್ಥವಾಗದೆ ಮಾಧವನು ಸುಮ್ಮನೆ ನೋಡಿದರು. ಗಾಂಧೀಜಿ ಮುಂದೆ ನಡೆದು ಭವನದೊಳಗೆ ಹೋದರು.

ಆಮೇಲೆ ಮಾಧವನಿಗೆ ಅರ್ಥವಾಯಿತು "ತುಮಾರ್ ನಾಮ್ ಕ್ಯಾ" ಎಂಬುದೇ ಆ ಪ್ರಶ್ನೆ.

ಮಾಧವನು ಒಳಗೆ ಹೋಗಿ ಗೋಡೆಯ ಬದಿಯಲ್ಲಿ ಎಲ್ಲರೊಂದಿಗೆ ಸಾಲಾಗಿ ಕುಳಿತನು. ಎಲ್ಲರಿಗೂ ಕಾಣುವ ಹಾಗೆ ಗಾಂಧೀಜೀ ತಲೆ ತಗ್ಗಿಸಿ, ಕೈಮುಗಿದು ಕುಳಿತಿದ್ದರು. ಪಕ್ಕದಲ್ಲಿದ್ದೊಬ್ಬರು ಸುತ್ತಲಿದ್ದವರಿಗೆ ಕೇಳುವ ಹವಾದನಿಯಲ್ಲಿ ನಿತ್ಯ ಪ್ರಾರ್ಥನಾವಾಕ್ಯಗಳನ್ನು ಹೀಗೆ ಹೇಳುತ್ತಿದ್ದರು.

ರಘುಪತಿರಾಘವ ರಾಜಾರಾಂ
ಪತಿತ ಪಾವನ ಸೀತಾರಾಂ
ಈಶ್ವರ ಅಲ್ಲಾ ತೇರೇನಾಂ
ಸಬಕೋ ಸನ್ಮತಿ ದೇಭಗವಾನ್
ರಾಮ ರಾಮ ಜಯ ರಾಜಾರಾಂ
ರಾಮ ರಾಮ ಜಯಸೀತಾರಾಂ"

"ರಾಂ–ರಾಂ" ಎಂದು ಎಲ್ಲರೂ ಧ್ವನಿಬೆರೆಸುವರು.

ಆಗ ಅಲ್ಲೆಲ್ಲಾ ಒಂದು ಬಗೆಯ ಅನಿರ್ವಚನೀಯವಾದ ಶಾಂತತೆಯ ವಾತಾವರಣ ವಾಗಿ ಬಿಡುತ್ತಿತ್ತು.

ಹಗುರವಾದ ಈ ದಿವ್ಯರಾಮ ಧ್ಯಾನವನ್ನು ಹೃದಯದಲ್ಲಿ ತುಂಬಿ ಎತ್ತಿಕೊಂಡು ಎಲ್ಲರೂ ಅಲ್ಲಿಂದ ಎದ್ದು ಹೋಗುತ್ತಿದ್ದರು.

ಹೀಗೆಯೇ ಗಾಂಧೀಜಿಯವರು ಆ ಬೆಟ್ಟದೊಡೆಯನಾದ ನಂದೀಶ್ವರಾಲಯಕ್ಕೂ ಮಧ್ಯಾಹ್ನದ ಪೂಜೆಯ ವೇಳೆಗೆ ಬರುವುದುಂಟು. ಆಗ ಅರ್ಚಕರು ಅವರಿಗೆ ದೇವರ ಮಾಲೆಯನ್ನು ತಂದು ಹಾಕಿ ಹಣ್ಣುಗಳನ್ನು ಕೊಡುತ್ತಾರೆ.

ಗಾಂಧೀಜೀ ಅದನ್ನೆಲ್ಲಾ ತೆಗೆದು ಸಣ್ಣ ಮಕ್ಕಳಿಗೆ ಹಂಚಿ ಕೊಡುತ್ತಾರೆ. ನೋಡಿದವರೆಲ್ಲರಲ್ಲಿಯೂ ಧನ್ಯರಾದ ಪ್ರಸನ್ನತೆ ಬೆಳಗುತ್ತದೆ.

ಮಹಾತ್ಮ ಗಾಂಧೀಜೀಯವರ ಕಾರ್ಯಗಳೆಲ್ಲವೂ ಗಂಟೆ ತಪ್ಪದೆ ನಡೆಯುವಂತಾದ್ದು. ಅಂತಲೇ ಅವರ ಸೊಂಟದಲ್ಲಿ ಯಾವಾಗಲೂ ಸಣ್ಣವಾಚು ನೇತಾಡುತ್ತಿರುತ್ತದೆ

ಮಾಧವನು ಹೇಳಿದ ನಂದಿ ಬೆಟ್ಟದ ವರ್ಣನೆಯನ್ನನುಸರಿಸಿ, ನಾನು ಕವನ ಕಟ್ಟಿದ್ದು, (ಗಾಂಧೀಜೀ ನಂದಿ ಹಿಲ್ಸ್‌ಗೆ ಬಂದದ್ದು 1935)

**ನಂದಿಗಿರಿ**

ಶ್ರೀ ನಿಲಯದಂತೆ ಕೋಲಾರ ಶ್ರೀ ನಿಲಯದಿಂ
ಭೂನಾಕದಂತೆ ವಿದ್ಯುನ್ನಾಕದೀಪದಿಂ
ಭೂನಾಕದಂತೆಸೆವ ಮೈಸೂರು ದೇಶದೊಳ್ಮೇಲಾಗಿ ಮೆರೆಯುತ್ತಿರುವ
ಆನಂದಗಿರಿಯ ನೇತ್ರಾನಂದದೆಡೆಯಂ
ತಪೋನಿಲಯವೆನಿಪ ಶಾಂತತೆಯ ನಾಲೆಡೆಯಂ
ಮಹಾನಾಗಮಭ್ರದೊಳ್ಪಿಡೆಬಾಗಿದವೊಲಿರುವ ಶಿಖರವೇಂ ಬಣ್ಣಿಪೆನಹಾ!

ಇರುಳೆಂಬ ಕಾರ್ಗಡಿ ನೋಳ್ಪುತ್ತ ಮೊತ್ತೊಮ್ಮೆ
ಮಿಡುತಿಹ ಮುತ್ತುಗಳ ಹರಳೊ ನಿಶಿಧರಿಸಾ
ಭರಣವೋ ಭೂವ್ಯಗ್ರದಿಂ ಮೇಲಕೇರಿ ಗಗನದಲ್ಲೆಲ್ಲ ಹರಡಿ ಬಳಿಕ
ಇರಲುಜಾಗಿಲ್ಲ ದಂತಿರಲು ಬಾನಿನ ಬದಿಯ
ಲಿರಲು ಚಂದಲ್ಲೆಂದು ಧರೆಯೊಳಲ್ಲಲ್ಲಿ ನೆಲೆ
ಸಿರುವ ತಾರೆಗಳ ಮಂದಿರವೆನೆ ತಡಿದ್ವೀಪ ಮೆರೆವುದೀಕ್ಷಿಸಲೆತ್ತಲುಂ

ಸಂತತಂ ಸುಯ್ಯೆಲರ ತಂಪಿನಿಂದಿಂಪಿನಿಂ
ಸಂತತಂ ತೋಟಗಳ ಗುಣ್ಪಿನಿಂ ತಣ್ಪಿನಿಂ
ಸಂತತಂ ಬಹುವಿಧ ದ್ರುಮಲತೆಯ ತಂಪಿನಿಂದಿಂಪಿನಿಂದೆ
ಸಂತತಂ ಅತ್ಯಂತ ಸೊಗಸು ಸೊಗ ಗಾಳಿಯಲಿ
ಸಂತನೀಯುಗದ ಅವತಾರಿ ಗಾಂಧೀ ತಂಗಿ
ನಿಂತು ನಡೆದಾಡಿದಂತಹ ಪಾದಧೂಳಿಯ ಮಹಂತ ನೆಲೆಸಿದ ಗಿರಿಯಿದೂ!

ಒಂದು ಕಡೆ ಮೈನವಿರನೇಳಿಸುವ ಪಾತಾಳ
ಕೊಂದಿಪೊನ್ನತದ ಟಿಪ್ಪೂಡ್ರಾಪು ಬಂಡೆ
ಮತ್ತೊಂದು ಕಡೆವನಮಧ್ಯೆ ನರನು ಮೂಗಡೆಕೋಟೆ ಮೇಲ್ಗಡೆಯ ಶಿಖರದಲ್ಲಿ
ನಂದೀಶ್ವರಾಲಯದ ರಾಜೆ ತಗ್ಗಿನ ತಳದಿ
ಗಾಂಧೀ ಮಹಾತ್ಮನಿದ್ದೋ ಕ್ಲೇಡು ಭವನ ಪ್ರತಿ
ಯೊಂದು ಕಡೆಯಂ ದುರ್ಗವಿದು ಸಿರಿಯಧಾಮ ವೆಂದೆರೆಕೆನಿಪ ಪರಮಾನಂದವೇ!

("ನವಗಿರಿನಂದ")

# ಗಂಗಾಂಬಿಕೆಯ ವಚನಾಮೃತ

❁ ಮೋಟಗಿ ಮಲ್ಲಿಕಾರ್ಜುನ, ಕನ್ನಡ ಕವಿ ಕಾಳಿದಾಸ, ಅಥಣಿ, ಬೆಳಗಾವಿ ಜಿಲ್ಲೆ.

---

[1] "ಇದೇನೊ. ಮೀರಿ ತೋರುವ ಮೂರುತಿ ಪುಷ್ಪ ಗುಂಪಿನಲ್ಲಿ ಕಾಣದೆ ಹೋಗಿದೆ.
ಇದೇನೊ, ಮೀರಿ ತೋರುವ ಮೂರುತಿ ಕರದಲ್ಲಿಯ ಲಿಂಗದಂತೆ ಉಲುಹದ ಸ್ಥಿತಿ ತೋರುತ್ತದೆ.
ಇಂತಪ್ಪ ಮೂರ್ತಿಯಕಂಡು ಗಂಗಾಪ್ರಿಯ ಕೂಡಲಸಂಗನ ಶರಣನ
ಸತಿಯಳು ಧನ್ಯಳಾದಳು ಚನ್ನಬಸವಣ್ಣಾ."

[2] "ನಮ್ಮಯ್ಯನ ಮನದಲ್ಲಿ ಮಾತಿನಲ್ಲಿ ಸೂಸುವ ಮೂರ್ತಿ ನೋಡ ನೋಡುತ್ತ ಬಯಲಾಯಿತಲ್ಲಾ !
ಇದು ಅಲ್ಲಮಯ್ಯ ಮಾಡಿದ ಬೇಟ. ಹೋದುದು ನಿಶ್ಚಯವಾದಡೆ ಕರುಳು ಕಳವಳಿಸುತ್ತಿದ್ದವು.
ಇಂತಪ್ಪ ಕಂದ ಪೋದಡೆಯೂ ಪೋಗಿಲ್ಲ. ಗಂಗಾಪ್ರಿಯ ಕೂಡಲ ಸಂಗನ ಶರಣಳ
ಮಾಲೆಯನುಂಬುದಕ್ಕೆ ಬಾರ, ಕೇಳಾ ಚನ್ನಬಸವಣ್ಣಾ."

[3] "ನೇತ್ರಮಧ್ಯಮದಲ್ಲಿ ಸೂಸುವ ತ್ರಿಣೇತ್ರನ ರೂಪವೆ ಸಿದ್ಧರಾಮಯ್ಯನಾದ.
ಜಿಹ್ವೆಯ ಮಧ್ಯದಲ್ಲಿ ಸೂಸುವ ರುಚಿಯೆ ಸಿದ್ಧರಾಮಯ್ಯನಾದ.
ಶ್ರೋತ್ರದಲ್ಲಿ ತುಂಬಿ ಪೂರೈಸುವ ಶಬ್ದವೆ ಸಿದ್ಧರಾಮಯ್ಯನಾದ.
ಘ್ರಾಣದಲ್ಲಿ ತುಂಬಿ ತುಳುಕುವ ಮೂರ್ತಿಯೆ ಸಿದ್ಧರಾಮಯ್ಯನಾದ.
ತ್ವಕ್ಕಿನಲ್ಲಿ ಅರಿವ ಮೂರ್ತಿಯೆ ಅಚ್ಚೊತ್ತಿದ ಸಿದ್ಧರಾಮಯ್ಯನಾದ.
ಇಂತಪ್ಪ ಪರಶಿವಮೂರ್ತಿ ಸಿದ್ಧರಾಮಯ್ಯನ ಪಾದೋದಕವ ಕೊಂಡು
ಪರವಸ್ತು ನಾನಾದೆ, ಗಂಗಾಪ್ರಿಯ ಕೂಡಲಸಂಗಮದೇವಾ."

[4] "ಒಂದು ಹಾಳ ಭೂಮಿಯ ಹುಲಿ ಬಂದು ಎನ್ನ ಎಳಗರುವ ಭಕ್ಷಿಸಿತ್ತಲ್ಲಾ!
ಆ ಹುಲಿ ಹಾಳಿಗೆ ಹೋಗದು. ಆ ಹುಲಿ ಎಳೆಗರುವ ಕಂಡು ಜನನಿಯಾಯಿತ್ತು.
ಇದನೇನೆಂಬೆ ಗಂಗಾಪ್ರಿಯ ಕೂಡಲಸಂಗಮದೇವಾ !"

[5] "ಅವಳ ಕಂದ ಬಾಲಸಂಗ, ನಿನ್ನ ಕಂದ ಚನ್ನಲಿಂಗ
ಎಂದು ಹೇಳಿದರಮ್ಮಾ ಎನ್ನ ಒಡೆಯರು.
ಫಲವಿಲ್ಲದ ಕಂದನರ್ಪಿಸವಳಿಗೆ, ಎನಗೆ ಫಲವಿಲ್ಲ, ಕಂದನಿಲ್ಲ.
ಇದೇನೊ ದುಃಖದಂದುಗ ಗಂಗಾಪ್ರಿಯ ಕೂಡಲಸಂಗಮದೇವಾ ?"

[6] "ಲಿಂಗ ಕುಸುಮಗಳಿನ್ನಾಚಾರಲಿಂಗಕ್ಕಿಡಿಯೆ ಚನ್ನ.
ಲಿಂಗವಸನದಂತರಂಗವಸನ ತರಿಸಿದೆಯೆ ಚನ್ನ.
ಲಿಂಗದರ್ಚನೆಗುದಕವ ತರಪೋದೆಯೆ ಚನ್ನ.
ಲಿಂಗ ನಿಮಿತ್ತ ಕುಸುಮಾರಾಮ ವಿರಚಿಸಹೋದೆಯೆ ಚನ್ನ.
ಬಸವಯ್ಯನಾಚರಣೆ ಸೊಗಸಾಗದಾಗಿ ಹೋದೆಯೆ ಗಂಗಾಪ್ರಿಯ ಕೂಡಲಸಂಗಚನ್ನ."

[7] "ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತೊ ಮಾದಲಾಂಬಿಕಾ ನಂದನನು?
ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯ ನೋಳ್ಪನೆಂತೊ ಮಾದರಸನ ಮೋಹದಮಗನು ?
ಸಾಂದ್ರವಾಗಿ ಲಿಂಗಾರ್ಚನೆ ಲಿಂಗತೃಪ್ತಿ ಅನುಗೆಯ್ವನೆಂತೊ ಗಂಗಾಪ್ರಿಯ ಕೂಡಲಸಂಗನಶರಣ ಚನ್ನಾ ?

[8] "ಮಡಿವಾಳಣ್ಣಂಗೇಕೆ ಬಾರದವ್ವಾ ಕರುಣರಸ ? ಮಡಿವಾಳಣ್ಣಂಗೇಕೆ ಬಾರದವ್ವಾ ಶೌರ್ಯರಸ ?
ಮಡಿವಾಳಣ್ಣಂಗೇಕೆ ಬಾರದವ್ವಾ ಅದ್ಭುತರಸ ? ಮಡಿವಾಳಣ್ಣಂಗೇಕೆ ಬಾರದವ್ವಾ ಗಂಗಾಪ್ರಿಯ ಕೂಡಲಸಂಗನ ಶರಣಪ್ರಾಣದಾನರಸ ಸಿದ್ಧರಾಮಯ್ಯಾ ?"

---

**ಟೀ. ಸಂದರ್ಭ :** ಕಲ್ಯಾಣದ ಅನುಭವ ಮಂಟಪದಲ್ಲಿ ಶಿವಶರಣ ಶರಣೆಯರ ಮಧ್ಯದಲ್ಲಿ ಪ್ರಭುವು ವಿರಾಜ ಮಾನನಾಗಿದ್ದಾನೆ. ಸದಾಕಾಲ ಆಧ್ಯಾತ್ಮಿಕ ಚರ್ಚೆ ಹಾಗೂ ಶಿವಶರಣ ಶರಣೆಯರ ಅನುಭವಸಾಗರದ ಆಳವನ್ನು ಅರಿಯಬೇಕೆಂಬಾಶೆ ಈ ಪ್ರಭುವಿಗೆ. ಈಗ ಏನೋ ಒಮ್ಮೆ ಸುಮ್ಮನೆ ನಾಟಕ ಮಾಡುವವನಂತೆ ಎಲ್ಲವನ್ನೂ ತಾನು ಬಲ್ಲವನಾಗಿದ್ದರೂ, ಈಗ ಬಸವಾದಿಗಳನ್ನು ಒಮ್ಮೆ ಕೆಣಕಿ ನೋಡಬೇಕೆಂಬ ತಂತ್ರದಿಂದ ಸತಿಪತಿ ಸಂಬಂಧವಾದ ವಿಷಯಗಳನ್ನು ಮಾನವೀಯ ಭಾವನೆಯಿಂದೊಡಗೂಡಿ ಪ್ರಶ್ನಿಸುತ್ತ ಪ್ರಭುವು ಅವರನ್ನು ಪರೀಕ್ಷೆಗೆ ಒಳಪಡಿಸಿದ್ದಾನೆ. ಪ್ರಭುವು ಕೇಳಿದ ಪ್ರಶ್ನೆಗಳಿಗೆ ಎಲ್ಲ ಶಿವಶರಣ ಶರಣೆಯರೂ ತಮ ತಮಗೆ ತೋಚಿದ ಅನುಭವ ವಾಣಿಗಳ ಉತ್ತರ ನೀಡುತ್ತಾರೆ. ಈ ಸಂದರ್ಭದಲ್ಲಿ ಬಸವಣ್ಣನವರ ಹೇಳಿಕೆಯನ್ನು ಪ್ರಭುದೇವರು ಅಲ್ಲಗಳೆದು ಅವರನ್ನು ಹೀಯಾಳಿಸುವರು. ಈ ಪ್ರಭುದೇವರಿಂದಾದ ಗುರುನಿಂದೆಯನ್ನು ಕೇಳಬಾರದೆಂದು ಚನ್ನಬಸವಣ್ಣನವರು ಗುರುನಿಂದೆಗೆ ಪ್ರಾಣವಿಯೋಗವೇ ಪ್ರಾಯಶ್ಚಿತ್ತ ವೆಂದು ಆಗಳೇ ಪ್ರಭುವಿನ ಪಾದದಲ್ಲಿ ಪ್ರಾಣವಿಯೋಗ ಮಾಡುವರು. ತಮ್ಮ ಪಾದದಲ್ಲಿ ಪ್ರಾಣವಿಯೋಗ ಮಾಡಿದ ಆ ಮುದ್ದು ಚನ್ನಬಸವಣ್ಣನನ್ನು ಎತ್ತಿ ಎಲ್ಲಿಯೂ ಚಲನೆ ಇಲ್ಲದುದನ್ನು ಕಂಡು ಪ್ರಭುದೇವರು ಪ್ರಳಾಪಿಸುವರು. ಅನಿಮಿಷಲಿಂಗ ಬಯಲಾಯಿತ್ತಲ್ಲಾ ಮಡಿವಾಳ. ಇಂತಪ್ಪ ಲಿಂಗವಗಲಿ ಗುಹೇಶ್ವರಲಿಂಗವ ಕಾಣುವ ಪರಿಯೆಂತು ? ಪಶ್ಚಿಮಗಿರಿಯನ್ನು ಏರಿ ಹೋದೆಯಾ ಚನ್ನಬಸವಾ "ಉತ್ತರ ಕೋಣೆಯಲಿ ಶಯನ ಮಾಡಲು ಹೋದೆಯಾ ಚನ್ನಬಸವಾ" ಅಲ್ಲಮಪ್ರಭುವು ಹೀಗೆ ಪ್ರಳಾಪಿಸುತ್ತಿರಲು ಬಸವಣ್ಣ, ಸಿದ್ಧರಾಮ ನೀಲಮ್ಮ, ಅಕ್ಕನಾಗಮ್ಮ ಎಲ್ಲರೂ ಚನ್ನಬಸವಣ್ಣನ ಗುಣಗಾನ ಮಾಡುತ್ತ ಹಾಡುತ್ತ ಪ್ರಳಾಪಿಸುವರು.

# ಆರೋಗ್ಯದರಿವು

ಎಂ. ಕೆ. ಭಾಶಿಂಗಿ, ಕೃಷಿ ಇಲಾಖೆ, ಅಥಣಿ, ಬೆಳಗಾಂ ಜಿಲ್ಲೆ.

---

ಬೆಳಗಿನೊಳು ಬೇಗೆದ್ದು
ಸುಳಿಯುವ ತಂಗಾಳಿಯಲಿ ನಡೆದು
ಚಳಿಗೆ ಮೈಯೊಡ್ಡಿಯಾದಡೆ
ಅಳಿಯದಾರೋಗ್ಯವು ಕಾಣಾ ಮಕ್ಕಳೆ.

ಮುದ್ದು ಕುವರರೆ! ಅನುದಿನವೂ
ನಿದ್ದೆಯಿಂದೆದ್ದ ಕೂಡಲೆ ಯಾವ
ಗದ್ದಲ ಮಾಡದೆ ಶುಚಿಗೊಳಿಸಿ
ಖುದ್ದಾಗಿ, ಮೆಲ್ಲುವ ಹಲ್ಲುಗಳನು ಬಿಡದೆ.

ಹೊಟ್ಟೆ ಬಟ್ಟೆಗಳೆರಡೂ
ಒಟ್ಟಾರೆ ಸ್ವಚ್ಛಶುದ್ಧವಾಗಿರೆ
ಬಿಟ್ಟೋಡುವಳು ಮಾರಿ ದೂರದೂರ
ಗುಟ್ಟವನರಿದು ಬಾಳಿ ಮಕ್ಕಳೆ.

ಹುರಿದ ಕರೆದ ತಿಂಡಿಗಳೆರಡನೂ
ಮರೆಯದೆ ತ್ಯಜಿಸಿ, ಹಸಿರು ತಾಜಾ
ತರಕಾರಿ ಮೊಳಕೆಯೊಡೆದ ಕಾಳುಗಳ
ಬೆರಕೆ ಮಾಡಿ ಸೇವಿಸಿದವರಾರೋಗ್ಯ ಬಲುಗಟ್ಟಿ ಮಕ್ಕಳೆ-

ಹೊಳೆವ ನೇಸರ ಉದಯಿಸುವ ಮುನ್ನ
ತಿಳಿನೀರು ಕೊಳದಲ್ಲಿ ಮಿಂದೊಡೆ
ಬಳುವಳಿಯಾಗಿಹುದು ಆರೋಗ್ಯ ಸಲೆ
ತಿಳಿದು ಅನುಸರಿಸಿ ಮುದ್ದು ಮಕ್ಕಳೆ.

# ಕ್ಷೇತ್ರ ವಾರ್ತೆ

–ಹೆಚ್. ಬಿ. ಗಂಗಾಧರಯ್ಯ.

## ಶ್ರೀ ಶ್ರೀಗಳ ವಜ್ರ ಮಹೋತ್ಸವ

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪೀಠಾರೋಹಣ ವಜ್ರ ಮಹೋತ್ಸವ ಆಚರಣೆಯ ಪೂರ್ವಸಿದ್ಧತಾ ಸಭೆ ದಿನಾಂಕ 4 ನವಂಬರ್ - 95 ರಂದು ನಡೆಯಿತು. ವಜ್ರ ಮಹೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಬಿ. ಎಸ್. ಮುದ್ದಪ್ಪನವರು ನಿರ್ಮಾಣ ವಾಗುತ್ತಿರುವ ಸ್ಮರಣೀಯ ಸ್ಮಾರಕಗಳ ಬೆಳವಣಿಗೆಯ ಬಗ್ಗೆ ಮಾತನಾಡಿ ಇವು ಪೂರ್ಣವಾಗಲು ಇನ್ನೂ 1 ಕೋಟಿ ರೂಗಳು ಬೇಕಾಗಿದೆ. ಹಣದ ಕೊರತೆ ಯಿಂದಾಗಿ ಮಂದಗತಿಯಲ್ಲಿ ಕೆಲಸ ಸಾಗುತ್ತಿದೆ. 5 ರೂ–3500-00 ರೂಗಳ ಶ್ರೇಣಿ ಯವರೆಗೆ ಸುಮಾರು 10 ಲಕ್ಷ ಟಿಕೆಟ್‌ಗಳನ್ನು ಮಾಡಿಸಿ ಮಾರಾಟಕ್ಕೆ ಬಿಡುಗಡೆ ಮಾಡಲಾಯಿತು. ಆದರೆ ನಿರೀಕ್ಷಿತ ಮಟ್ಟದಲ್ಲಿ ಮಾರಾಟವಾಗದೆ ಹೆಚ್ಚಿನ ಸಂಖ್ಯೆಯಲ್ಲಿ ಉಳಿದಿವೆ.

ವಜ್ರಮಹೋತ್ಸವ ಸಮಾರಂಭಕ್ಕೆ $2\frac{1}{2}$ ಲಕ್ಷ ಮಂದಿ ಸೇರುವ ನಿರೀಕ್ಷೆಯಿದೆ. ಸಮಾರಂಭ 3 ದಿನಗಳು ನಡೆಯುತ್ತವೆ.

ಮೊದಲದಿನ ಭವ್ಯ ದಿವ್ಯ ಸ್ಮಾರಕಗಳಾದ ವಿದ್ಯಾರ್ಥಿನಿಲಯ ಮತ್ತು ಪ್ರಸಾದ ನಿಲಯುಗಳನ್ನು ಉದ್ಘಾಟನೆ ಮಾಡಿಸಿ ಶ್ರೀ ಮಠಕ್ಕೆ ಅರ್ಪಿಸುವುದು. ಎರಡನೆಯ ದಿನ ವಿಭಿನ್ನತೆಯಿಂದ ಕೂಡಿದ 6 ಗೋಷ್ಠಿಗಳು ನಡೆಯುತ್ತವೆ. ಮೂರನೆಯ ದಿವಸ ಸಮಾ ರೋಪ ಸಮಾರಂಭ. ಈ ಸಮಾರಂಭಗಳಿಗೆ ರಾಜ್ಯ ಮತ್ತು ರಾಷ್ಟ್ರ ಮಟ್ಟಗಳಿಂದ ಘನತೆವೆತ್ತ ಪ್ರಮುಖ ಗೌರವಾನ್ವಿತ ಗಣ್ಯರನ್ನು ಆಹ್ವಾನಿಸಲು ಯೋಜಿಸಲಾಗಿದೆ.

ಶ್ರೀ ಮಠದ ಆಡಳಿತಾಧಿಕಾರಿಗಳಾದ ಶ್ರೀ ಪುಟ್ಟಶಂಕರಯ್ಯನವರು ಮಾತನಾಡಿ ಈ ಸಂದರ್ಭದಲ್ಲಿ ಬೃಹತ್ ದಾಸೋಹ ಮತ್ತು ಇತರೆ ಬಾಬುಗಳಿಗೆ 1000 ಕ್ವಿಂಟಾಲ್ ಅಕ್ಕಿ ಮತ್ತು 50 ಲಕ್ಷ ರೂಗಳು ಬೇಕಾಗುತ್ತವೆಂದು ನಿರ್ಧರಿಸಲಾಗಿದೆ ಎಂದು ಹೇಳಿದರು.

ಈ ಸ್ಮಾರಕಗಳು ಪೂರ್ಣವಾಗಲು ಮತ್ತು ಸಮಾರಂಭ ಯಶಸ್ವಿಯಾಗಿ ನೆರವೇರಲು ನಾಡಿನ ಎಲ್ಲಾ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು, ಹಿತೈಷಿಗಳು ಸಿದ್ಧಗಂಗೆಯ ಸೇವಾ ಸಾಗರಕ್ಕೆ ಉದಾರವಾಗಿ ನೆರವು ನೀಡಬೇಕಾಗಿ ಕೋರಿದರು. ಹಳೆಯ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಂ. ಎನ್. ಚನ್ನ ಬಸಪ್ಪನವರು ಸಂಘದ ಪಾತ್ರ ಈ ಬೃಹತ್‌ಯೋಜನಾ ಕಾರ್ಯಕ್ಕೆ ಮಹತ್ತರವಾದು–.

ನಿಧಿ ಮತ್ತು ದವಸಧಾನ್ಯಗಳನ್ನು ಸಂಗ್ರಹಿಸಲು/ಕೂಡಿಸಲು ಉತ್ಸಾಹಿಗಳಾಗಿ ಮುಂದೆ ಬರಬೇಕು. ನೌಕರಿಯಲ್ಲಿರುವವರು ರಜೆ ಹಾಕಿ ಮನಃಪೂರ್ವಕವಾಗಿ ಈ ಅಪೂರ್ವ ವಿಶಿಷ್ಟ ಸೇವಾ ಕಾರ್ಯದಲ್ಲಿ ಭಾಗಿಗಳಾಗಿ ಸಂಪೂರ್ಣ ಸಹಕಾರ ನೀಡಬೇಕೆಂದು ಮನವಿ ಮಾಡಿದರು. ಈ ಉದ್ದೇಶಕ್ಕಾಗಿ ನವಂಬರ್ 95 ಕೊನೆಯವಾರದಲ್ಲಿ ಹಳೆಯ ವಿದ್ಯಾರ್ಥಿ ಸಂಘದ ಸರ್ವಸದಸ್ಯರ ಸಭೆ ಕರೆಯಲಾಗುವುದೆಂದು ಹೇಳಿದರು.

ವಜ್ರ ಮಹೋತ್ಸವ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಹಸಬಿ ಮಾತನಾಡಿ ಶ್ರೀ ಶ್ರೀಗಳ ಮಹಾನ್ ವ್ಯಕ್ತಿತ್ವ ಮತ್ತು ಸಿದ್ಧಗಂಗೆ ಸೇವಾ ಸಾಗರ ಕಾರ್ಯಗಳಿಗೆ ಜನತೆ ನಾಡಿನಲ್ಲಿ ಸದ್ಭಾವನೆ ಹೊಂದಿ ಉದಾರವಾಗಿ ಕೊಡುವವರಿದ್ದಾರೆ. ಆದರೆ ಜನರ ಬಳಿಗೆ ಹೋಗಿ ವಿಚಾರ ತಿಳಿಸುವ ಸಹಸ್ರಾರು ಮಂದಿ ಕಾರ್ಯಕರ್ತರು ಬೇಕಾಗಿದೆ. ಈ ಕೆಲಸವನ್ನು ಶ್ರೀ ಮಠದ ಶಿಕ್ಷಣ ಸಂಸ್ಥೆಗಳ ಶಿಕ್ಷಕರು ಮತ್ತು ಹಳೆಯ ವಿದ್ಯಾರ್ಥಿ ಸಂಘ ಸಕ್ರಿಯವಾಗಿ ಮಾಡಬೇಕೆಂದು ಬಿನ್ನವಿಸಿಕೊಂಡರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಶ್ರೀ ಶ್ರೀಗಳ ಘನ ವ್ಯಕ್ತಿತ್ವಕ್ಕೆ ಅನುಗುಣವಾಗಿ ಸ್ಮಾರಕಗಳು ಮತ್ತು ಸಮಾರಂಭಗಳು ಯಶಸ್ವಿಯಾಗಬೇಕೆಂದು ಆಶಿಸಿದರು.

ಈ ಸಭೆಯಲ್ಲಿ ಚನ್ನಪ್ಪ ಎರೆಸೀಮೆ, ಎಸ್.ಪಿ. ಶಿವಶಂಕರ್, ಗಂಗರೇವಣ್ಣ ಸಾಸಲು ನಂಜುಡಪ್ಪ ಮಾತನಾಡಿದರು.

ತುಮಕೂರು-ಬೆಂಗಳೂರು ಮತ್ತು ಇತರೆ ಕಡೆಗಳಿಂದ ಶ್ರೀಮಠದ ಹಳೆಯವಿದ್ಯಾರ್ಥಿಗಳು, ಉಪಾಧ್ಯಾಯರುಗಳು ಮತ್ತು ಭಕ್ತಾದಿಗಳು ಸಭೆಯಲ್ಲಿ ಪಾಲ್ಗೊಂಡಿದ್ದರು.

ಪ್ರಾರಂಭಕ್ಕೆ ಹೆಚ್. ಬಿ. ಗಂಗಾಧರಯ್ಯ ಸ್ವಾಗತಿಸಿದರು. ಹೆಚ್. ವಿ. ವೀರಭದ್ರಯ್ಯ ವಂದಿಸಿದರು.

### ಓದುಗರಲ್ಲಿ ವಿನಂತಿ

ಆಜೀವ ಸದಸ್ಯರು ವಿಳಾಸ ಬದಲಾವಣೆಯಾದ ಕೂಡಲೆ ತಿಳಿಸಿ. **'ಸಿದ್ಧಗಂಗಾ'** ಇದರಿಂದ ಕ್ರಮವಾಗಿ ನಿಮ್ಮ ಕೈಸೇರುತ್ತದೆ. ನಿಮ್ಮ **ಆಜೀವ ಸದಸ್ಯತ್ವದ ಕ್ರಮಾಂಕ** ತಿಳಿಸಲು ಮರೆಯದಿರಿ.

ಪ್ರಕಾಶಕರು.

# : ಶ್ರದ್ಧಾಂಜಲಿ :

ಧಾರವಾಡದ ನವಕಲ್ಯಾಣ ಮಠದ ಮಹಾ ತಪಸ್ವಿ ಶ್ರೀ ಶ್ರೀ ಕುಮಾರ ಸ್ವಾಮಿಗಳು ಆಧುನಿಕ ಕಾಲಮಾನ ಕಂಡ ದೊಡ್ಡ ವಾಙ್ಮಿಯ ತಪಸ್ವಿ. ತಮ್ಮ ಸನಾತನ ಧರ್ಮವನ್ನು ಆಧುನಿಕ ವಿಚಾರಯುಗದ ದೃಷ್ಟಿ ಕೋನದಿಂದ ಅರ್ಥೈಸಿ ಅದರ ಪ್ರಸ್ತುತತೆಯನ್ನು ಎತ್ತಿ ಹಿಡಿದ ಮಹಾನುಭಾವರ ಶ್ರೇಣಿಯಲ್ಲಿ ಅವರಿಗೆ ದೊಡ್ಡ ಸ್ಥಾನವಿದೆ. ಜಗತ್ತಿನ ಎಲ್ಲಾ ತತ್ತ್ವವೇತ್ತರ, ವಿಚಾರವಂತರ ಆಲೋಚನೆಗಳ ಸಾರವನ್ನು ಗ್ರಹಿಸಿ ತಮ್ಮದೇ ನಿಲುವಿನಲ್ಲಿ ನಿಂತ ತತ್ವಜ್ಞಾನಿ. ಅವರ ಉಪನ್ಯಾಸಗಳೆಂದರೆ ಮನದಲ್ಲಿ ಜ್ಞಾನದ ಹೊಳಪು ತುಂಬುವ, ಜೀವನದ ಹೊಸ ಆಯಾಮವನ್ನು ಕಾಣಿಸುವ ಬೆಳಕಿನ ಮಾತುಗಳು. ಅವರ ಬರವಣಿಗೆ, ಅದು ಇಂಗ್ಲೀಷ್‌ಯಿರಲಿ ಕನ್ನಡವಿರಲ್ಲಿ, ತಮ್ಮದೇ ಆದ ಛಾಪವನ್ನು ಹೊಂದಿದೆ. ಅವರ ಕೃತಿಗಳಲ್ಲಿ ಬುದ್ಧ ಮತ್ತು ಬಸವ ಎಂಬುದು ದೇಶವಿದೇಶಗಳಲ್ಲಿ ಅವರಿಗೆ ಹೆಸರು ತಂದ ಕೃತಿ. ಮಿರ್ನ್‌ಕಣ್ ಮುಂಗಣಿ, ವೀರಶೈವದರ್ಶನ, ಕಾಲಪ್ರವಾಹ, ನೊದಲಾದವು ಅವರ ಇತರ ಕೃತಿಗಳು.

ದೇಶದೊಳಗೆ ಮತ್ತು ಹೊರಗೆ ಅವರು ಧರ್ಮಪ್ರಸಾರ ಕೈಗೊಂಡು ಅಸಂಖ್ಯಾತ ಶಿಷ್ಯರನ್ನು ಹೊಂದಿದ್ದರು. ಅವರ ದಿವ್ಯ ವ್ಯಕ್ತಿತ್ವದಿಂದ ಉದ್ಬೋಧಕ ಭಾಷಣಗಳಿಂದ ಪ್ರಭಾವೀ ಬರಹಗಳಿಂದ ನಾಡ ಜನತೆ ಸಾಕಷ್ಟು ಪ್ರಭಾವಿತವಾಗಿದೆ. ಅಪಾರ ಸಾಮಾಜಿಕ ಕಳಕಳಿಯಿದ್ದ ಅವರು ಧರ್ಮವನ್ನು ಸಾರ್ವತ್ರಿಕಗೊಳಿಸುವಲ್ಲಿ ಪೂರ್ಣ ಯಶಸ್ವಿಯಾಗಿದ್ದರು.

ದೆಹಲಿಯ ಸರ್ವಧರ್ಮಪರಿಷತ್ ಅವರು ಸಲ್ಲಿಸಿದ ಸೇವೆಯನ್ನು ಮನಗಂಡು "ಸರ್ವಧರ್ಮ ಚಕ್ರ" ಪ್ರಶಸ್ತಿ ನೀಡಿ ಗೌರವಿಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಎಂಬತ್ತೇಳು ವರ್ಷಗಳ ಸಾರ್ಥಕ ಜೀವನವನ್ನು ನಡೆಸಿ, ನಾಡಿನ ಜನತೆಯನ್ನು ಅನುಗ್ರಹಿಸಿ ಪೂಜ್ಯರು 22-10-1995 ರಂದು ಲಿಂಗೈಕ್ಯರಾದುದನ್ನು ತಿಳಿದು ನಮ್ಮ ಆಧ್ಯಾತ್ಮಿಕ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಯಿತೆಂದು ಭಾವಿಸಿದ್ದೇವೆ. ಪರಮಾತ್ಮನು ಅವರ ದಿವ್ಯಾತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62 ಕೇಂದ್ರ ಕಛೇರಿ : { 72866
ಸಿ.ಎಸ್.ಟಿ. 73656288 } 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು 560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13.42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶೀ ವೈ. ಟಿ. ಮಹದೇವಪ್ಪನವರು
5) ಶೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರಿ ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಂಧಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.